Photo by N. Thyagarajan



ಬಹುಮಾನ
ಪಡೆದ ಶೀರ್ಷಿಕೆ

ಮುಟ್ಟಬೇಡ !

ಕಳಿಸಿದವರು:
ಯಚ್. ಚಂದ್ರಶೇಖರ ರಾವ್

## ಈ ಸಂಚಿಕೆಯಲ್ಲಿ



ಮತ್ತು ಮಂಗಳಾರತಿ ತಟ್ಟೆ, ಫೋಟೋ ಸ್ಪರ್ಧೆಗಳೂ ಎಲ್ಲಾ ಇವೆ.

# ಪ್ರಸಾದ್ ಪ್ರಾಸೆಸ್

ನವೀನ ಪರಿಕರಗಳಿಂದ, ಅನುಭವಜ್ಞರಾದ ಕೆಲಸಗಾರರಿಂದ, ಲೈನು, ಹಾಫ್‌ಟೋನ್, ಮಿಶ್ರಮು, ಕಲರ್ ಬ್ಲಾಕುಗಳು, ಎಲ್ಲಾ ವಿಧವಾದ ಅಚ್ಚು ಕೆಲಸಗಳಿಗೆ ಅನುಕೂಲಿಸುವಂತೆ ಉತ್ತಮವಾಗಿ ತಯಾರುಮಾಡಿ ತಮಗೆ ಸಕಾಲದಲ್ಲಿ ಒದಗಿಸ ಬಲ್ಲೆವು.

'ಚಂದಮಾಮ' 'ಕಿನಿಮಾ'ದೊಳಗಿನ ಬ್ಲಾಕುಗಳು, ಕವರು ಪುಟದ ಕಲರ್ ಬ್ಲಾಕುಗಳು, ಒಳಗಿನ ಪ್ರಕಟನೆಯ ಬ್ಲಾಕುಗಳೊಂದಿಗೆ ಸಹಾ ಎಲ್ಲಾ ನಮ್ಮ ತಯಾರಿಕೆಯಾಗಿವೆ.

—: ವಿವರಗಳಿಗೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ :—

**ಪ್ರಸಾದ್ ಪ್ರಾಸೆಸ್**

**2 & 3 ಆರ್ಕಾಟ್ ರೋಡ್, ವಡಪಳನಿ, ಮದ್ರಾಸು–26**



## ಡೋಂಗರೇ ಬಾಲಾಮೃತ

★

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

## "ಚಂದಮಾಮ"ನಿಗೆ ಏಜಂಟರು ಬೇಕು

★

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣಸಣ್ಣ ಏಜಂಟರು ಬೇಕು. ನೀವು ಏಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳ ಬಹುದು. ಪ್ರತಿ ತಿಂಗಳೂ **2-0-0** ಕಳುಹಿಸುತ್ತಾ ಇದ್ದರೆ ನಿಮಗೆ **7** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 0-10-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ : ಮದ್ರಾಸು - 26

ಶೀಘ್ರದಲ್ಲಿಯೇ ಪ್ರದರ್ಶನವನ್ನು ನಿರೀಕ್ಷಿಸಿ!



ಎ. ವಿ. ಯಂ. ರವರ

# ಪೆಣ್

(ತಮಿಳು)

ಅಭಿನಯ :

ಅಂಜಲಿದೇವಿ, ವೈಜಯಂತಿಮಾಲ, ನಾಗಯ್ಯ, ಬಾಲಚಂದರ್,
ಆರ್. ಗಣೇಶ್, ಟಿ. ಎಸ್. ಬಾಲಯ್ಯ, ಕೆ. ಆರ್. ರಾಮಸ್ವಾಮಿ.

ನಿರ್ದೇಶನ: ಎಂ. ವಿ. ರಾಮನ್ ★ ಸ್ಟುಡಿಯೋ: ಎ. ವಿ. ಯಂ.

. A TALLAM RELEASE . . .

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟು ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲ ದೆ.

ಚಂದಮಾಮ ಪಬ್ಲಿಕೇ ನ್ಸ್,
ವಡಪಳನಿ.... ಮದ್ರಾಸ್.

ಹೆಸರು ಗಳಿಸಿದ ಚಂದಮಾಮ ಬಳಗದಲ್ಲಿ

ಇನ್ನೊಂದು ಭಾಷೆ

# ચાંદામામા

## (ಗುಜರಾತೀ)

ಹೊರಬೀಳಲಿರುವುದೆಂದು ಪ್ರಕಟಿಸಲು

ಕುತೂಹಲ ಪಡುತ್ತೇವೆ.



ವಾರ್ಷಿಕ ಚಂದಾ .... ರೂ. **4-8-0**

ಬಿಡಿ ಸಂಚಿಕೆ .... ,, **0-6-0**



**ಏಜನ್ಸೀ ಷರತುಗಳಿಗೆ ಬರೆಯಿರಿ**



ಚಂದಮಾಮ ಪಬ್ಲಿಕೇಷನ್ಸ್

ವಡಪಳನಿ :: ಮದರಾಸು - 26.

# ನಿಜವಾದ
# ಹೇರ್ ಟಾನಿಕ್

ಮಾರ್ಕೆಟುಗಳಲ್ಲಿ ಹಲವಾರು ತರದ ಕೂದಲಿಗೆ ಉಪಯೋಗಿಸುವ ತೈಲ ಗಳಿವೆ.' ಆದರೆ **ಗೋದ್ರೆಜ್** ರವರ **ಜಿ-೧೧** ಇರುವ ಹೇರ್ ಟಾನಿಕ್ ಎಲ್ಲಾ ತರದಕ್ಕೆ ವ್ಯತ್ಯಾಸಪಡಿಸುವುದು.

ಜಿ-೧೧, ಪ್ರಪಂಚದ-ವಿಖ್ಯಾತ ಕ್ರಿಮಿಸಂಹಾರಿಣಿಯು, ೧೯೪೧ ರಲ್ಲಿ ಪ್ರಕಟಿಸಿ, ವೈಜ್ಞಾನಿಕರೊಳಗೆ ಇದನ್ನು ಹೆಕ್ಸಾಕ್ಲೋರೋಫೀ (ಡೈಹೈಡಿಯೂಕ್ಸಿ ಹೆಕ್ಸಾಕ್ಲೋರೋ ಡೈಫೀನಿಲ್ ಮೆಥೇನ್) ಎಂದು ಪ್ರಚಾರಪಟ್ಟಿದೆ ಮತ್ತು ಆದರ್ಶಪ್ರಾಯವಾದ ಕೋಮಲ ಪರಿಮಳಭರಿತ ರಸಾಯನಿಕ ವಸ್ತು ವಿಶೇಷವನ್ನು ಸೌಂದರ್ಯ ವರ್ಧಕ ದ್ರವ್ಯಗಳಿಗೆ ಮಿಶ್ರಿಸಿದರೂ, ತನ್ನ ಕ್ರಿಮಿಸಂಹಾರಕ ದುರ್ಗಂಧ ವಿನಾಶಕ ಶಕ್ತಿಯನ್ನು ಕಳೆದು ಕೊಳ್ಳುವುದಿಲ್ಲವೆಂದು ಬಳಕೆಯಿಂದ ತಿಳಿದುಬಂದಿದೆ. ಇದರ ಅದ್ಭುತಶಕ್ತಿಯೆಂದರೆ ಸಾಧಾರಣವಾಗಿ ಚರ್ಮಕ್ಕಂಟಿರುವ ವಿಷಕ್ರಿಮಿಗಳನ್ನು ನಾಶಮಾಡುವುದು—ಮತ್ತು ಅದರಲ್ಲಿಯೇ ಇದರ ವಿಜಯ. ಗೋದ್ರೆಜ್—೩೩ ವರ್ಷಗಳ ಹಿಂದೆ,.ಪ್ರಥಮವಾಗಿ ಸಸ್ಯತೈಲ ನಿರ್ಮಿತ ಮೈ ಸಾಬೂನುಗಳನ್ನು ತಯಾರಿಸಿ, ಇದರ ಪೂರ್ತಿ ಹಕ್ಕೂ ಸ್ವಾತಂತ್ರ್ಯಗಳನ್ನು ಪಡೆದು, ಜಿ-೧೧ ಸೌಂದರ್ಯ ವರ್ಧಕಗಳನ್ನು ಯುರೋಪ್, ಅಮೇರಿಕಾಗಳಲ್ಲಿ ಬಳಸಿ ನೋಡಿದ ನಂತರ, ನಮ್ಮ ಭಾರತದಲ್ಲಿ ಪ್ರಚಾರ ಪಡಿಸಿದರು.

**ಈ ನಿಜವಾದ ಹೇರ್ ಟಾನಿಕ್ . .** ಹೊಟ್ಟು ತಲೆ ವ್ಯಾಧಿಯನ್ನು ಹತ್ತಿರ ಸೇರಿಸಲಿಕ್ಕಿಲ್ಲ.* ಜಿ-೧೧ ಉಳ್ಳ ಈ ಮನೋಲ್ಲಾಸಕರವಾದ ಹೇರ್ ಟಾನಿಕ್ ಕೆಲವು ಬೊಟ್ಟುಗಳಷ್ಟು ಪ್ರತಿ ದಿನವು ತಲೆಗೆ ಹಚ್ಚಿ ಚೆನ್ನಾಗಿ ತಿಕ್ಕಬೇಕು. ಇದರಿಂದ ಒಳ್ಳೆಯ ಮಿರುಮಿರುಗುವ ನವಕೋಮಲ ಶಿರೋಘೆಗಳು ಅಮೋಘವಾಗಿ ಬೆಳೆಯುವುವು. ಇದರಿಂದ ಅತ್ಯುತ್ತಮ ಫಲವನ್ನು ಪಡೆಯಬೇಕೆಂದರೆ, ಅತ್ಯದ್ಭುತವಾದ ಜಿ-೧೧ಉಳ್ಳ 'ಸಿಂಥಾಲ್' ಮೈ ಸಾಬೂನಿನಿಂದ ಕೂದಲನ್ನು ಚೆನ್ನಾಗಿ ತೊಳೆದುಕೊಳ್ಳಬೇಕು— ಅಲ್ಲದೆ ಇದು ಕಣ್ಣಿಗೆ ಅಪಾಯವಲ್ಲ.

*ಇದು ತಲೆ ಕೂದಲು, ತಲೆ ಬುರುಡೆಯ ಚರ್ಮಕ್ಕೆ ತಗಲತಕ್ಕ ಒಂದು ಕ್ಷಯ ರೋಗ, ಇದನ್ನು ಹಾಗೆಯೇ ಬಿಟ್ಟರೆ, ಬೋಳತಲೆ ಮೊದಲಾದ ಅನೇಕ ಚರ್ಮ ವ್ಯಾಧಿಗಳನ್ನು ತಂದಿಡುವುದು.






**ಗೋಡ್ರೆಜ್ ಹೇರ್ ಟಾನಿಕ್**

ಬರೇ ಒಂದು ಜಿ-೧೧ ಕೂಡಿರುವ (ಕ್ಲೋರೋಫ್ಯಾಲ್ ಅಲ್ಲ) ಅಪೂರ್ವ ಅಯ್ಕೆಯ ಸಸ್ಯತೈಲಗಳು ಸೇರಿವೆ.

ಆನಂದದಾಯಕವಾದ ಅದರ ಅಪೂರ್ವ ಪರಿಮಳವು ಶಿರೋಜಾಲಂಕಾರದ ಅಂದವನ್ನು ಹೆಚ್ಚಿಸುವುದು, ಅಥವಾ ತಲೆಯಲಂಕಾರದ ಬೆಡಗಿದೆ. ಬಣ್ಣ ಸೀಡುವುದು.

ರೂ. ೧-೬-೦ (ಟ್ಯಾಕ್ಸ್ ಬೇರೆ) ೪ ಔನ್ಸು ಮತ್ತು ೧ ರಾತ್ಲಿ ಬಾಟ್ಲಿಗಳು

Godrej **ಗೋದ್ರೆಜ್** ಸೋಪ್ಸ್, ಲಿಮಿಟೆಡ್
ಸ್ಥಾಪನೆ ೧೯೩೦

# ಚಂದಮಾಮ

ಸಂಚಾಲಕರು : ‘ ಚಕ್ರಪಾಣಿ ’

---

## ‘ ಅ ’ ಕಾರ ವಂದನೆ

ಅಮರಾದಿದೇವ ಇಳೆ ಈರೇಳು ಭುವನೇಶ
ಉಮೆಯರಸನೊರೆದ ಊರ್ಜಿತ ಖ್ಯಾತ ಋಜುಚರಿತ
ಎಸೆವ ಏಕೈಕ ವಿಭು ಒಲಿವ ನೋಲೈಸೆ ಭವ
ಕೌಷಧೀನಾಮ ಅಂದದರಾಮ ನಿಮಗೆಮ್ಮ
ಹರ್ನಿಶೀ ವಂದನವಿಃದೋ.
ಕಂಗೆಡಿಪ ಖಳರ ಗತಿಗಡಿದ ಘನಶಾಲಿ ವೀ
ರಾಙ್ಗ ಚಂಚಲೆಯ ಕಲುಷದ ಛಾಯೆ ತೊಡೆದ ದು
ರ್ಜಂಗುಳಿಗೆ ಝುಳಖಡುಗ ದುರಿತ ಭಞ್ಜಕ ಧನುಷ್
ಟಂಕಾರದಿಂ ಠಕ್ಕರಂ ಕೆಡೆವ ರಾಮರವ
ಡಂಗುರಿಸೆ ಢಾಣಾಗಿ ಭಕುತಗಣ ಕಿದುವೆ ಹಣ
ತಂಗದಿರ ನೀಲಾಂಗ ಶರಧಿಪಥ ಗತ ಕಥನ
ದಶರಥನ ಧವಳಕೀರ್ತಿ ಕುಮಾರ ನರರೂಪ
ಪಶುಪತಿಪ್ರಿಯ ಪರಮ ಫಲದಾತ ಬವರಗಳ
ಭಗ್ನಿಸುವ ಮಹಿಮ ನಾಮ.
ಯಜ್ಞದಿಂದೆಸೆದ ರಘುತಿಲಕ ಲವಕುಶಜನಕ
ವರ್ಜಿತಾಹಾರಿ ಶಬರಿಂಗೊಲಿದ ಶರವೀರ
ಷಡ್ಗುಣೈಶ್ವರ್ಯ ಸಂಪೂರ್ಣ ಸದ್ಭಕ್ತ ಹನು
ಮದ್ಗತಖಿಳೇಶಾ ನಮೋ!

---

ಸಂಪುಟ ೧೨ : ಏಪ್ರೆಲ್ ೧೯೫೪ : ಸಂಚಿಕೆ ೪





# ಋಷ್ಯಶೃಂಗ

ಬೆಳ್ಳನೆ ತಿಂಗಳು ಚೆಲ್ಲಿತ್ತು
ಜಿಲ್ಲನೆ ಗಾಳಿ ಬೀಸ್ತಿತ್ತು
ತಾತಾ ಜಗಲಿಲಿ ಕುಂತಿದ್ರು
ಗೀತಾ ಪುರಾಣ ಹೇಳ್ತಿದ್ರು.
ಮೊಮ್ಮಗನೊಬ್ಬ ಹೂಂಗುಡುತಿದ್ದ
ಗಮ್ಮನೆ ಮಕ್ಕಳು ಕೇಳ್ತಿದ್ರು.
ಚಿಟಕೆಯ ಮೂಗಿನೊಳೇರಿಸಿ ತಾತ
ಸಿರಿ ರಾಮಾಯಣ ಬಿಡಿಸಿದರು.

* * *

ಕೋಸಲವೆಂಬಾ ಬಲುಹಿರಿದೇಶ, ದಿ-
ನೇಶಕುಲದ ದಶರಥ ಸಾರ್ವಭೌಮ
ಸದ್ಧರ್ಮದಿಂದಲಿ ರಾಜ್ಯವನಾಳುತ-
ಯೋಧ್ಯೆಯಲಿರುತಿದ್ದ ಸುಗುಣಲಲಾಮ.
ಅವನಿಗೆ ಬಲಭುಜಗಳ ಹಾಗಿರುವ ಸ-
ಚಿವರೆಂಟು ಮಂದಿಗಳು.
ಅವರಲ್ಲಿ ಉದ್ದಾಮ ಸುಮಂತ್ರನೆಂಬವ
ಅವರೆಲ್ಲ ರಾಜವಿಧೇಯರ್ಗಳು.
ಕುಲಗುರು ವರ್ಯ ವಸಿಷ್ಠ ಪುರೋಹಿತ
ತಿಲವೂ ತಪ್ಪದೆ ಧರ್ಮ ನೋಡುತಿದ್ದ.
ದಶದಿಶೆಗಳಿಗೆಲ್ಲ ರಥವ ನೋಡಿಸಿಗೆದ್ದು
ದಶರಥರಾಜ ತಾ ಮೆರೆಯುತಿದ್ದ.

* * *

ಏನು ಮೆರೆದರೇನಯ್ಯೋ ಪಾಪಾ
ಮಾನವೇಶಗೆ ಮಗುವಿಲ್ಲ.
ಮಾನಿನಿ ಮಣಿಯರು ಮೂವರು ಸತಿಯರು
ಹೀನ ಪುಣ್ಯರೋ ವಿಧಿಬಲ್ಲ.
ಹಿರಿಯರಾಣಿ ಕೌಸಲ್ಯೆ ಮಹಾಗುಣಿ
ಸುರಸುಂದರಿ ಕೈಕೇಯಿ ಸತೀ
ಕಿರಿ ಸುಮಿತ್ರೆ ಬಲುಸಾಧ್ವಿ ಮೂವರೂ
ಪರಮಾಂಗನೆಯರೆ ವಿಧಿಯ ಖತಿ!
ಮೂವರು ಸತಿಯರು ಮಕ್ಕಳಿಗಾಗಿ
ಓವದ ನೋಂಪಿಗಳೇ ಇಲ್ಲ.
ಕೂಡಿ ಸತಿಯರ ದಶರಥ ತಾನೂ
ಮಾಡದ ದಾನವು ಇನ್ನಿಲ್ಲ.

* * *

ದಶರಥನೀ ಚಿಂತೆಯಿಂದ
ದಾರಿಕಾಣದೇ-



“ಮಾರಂಗ”

ಶಾಸ್ತ್ರಿ ಪಂಡಿತರನು ಕರೆಸಿ
ಶಾಂತಿ ಕೇಳಿದ.
ಅವರು ಶಾಸ್ತ್ರ ಸೂಕ್ಷ್ಮವೆಲ್ಲ
ಅವಲೋಕಿಸುತ
ಪುತ್ರಕಾಮೇಷ್ಟಿ ಮಾಡೆ
ಫಲಿಪುದೆಂದರು.
ಅದಕೆ ರಾಜ ಋಷ್ಯಶೃಂಗ
ನೆಂಬ ಋಷಿಯನು
ಕರೆಸೆ ಜನರ ಕಳಿಸಿ ಕ್ರತುವಿ
ಗುಜ್ಜಗಿಸಿದನು.

ಮೊಮ್ಮಗ:-“ಅವನಾರೋ ನಡುವಿಲಿ
ಓ ತಾತ? ಈ ಕತೆಗಡ್ಡನೆ ಬಂದಾತ?”

ಅಜ್ಜ:-“ಅವಸರ ಪಡದಿರು ತಾಳಪ್ಪಾ.
ಅರಸನಂತಿದ್ದು ಕೇಳಪ್ಪ.”

* * *

ರೋಮ ಪಾದನೆಂಬರಸಾ
ಭೂಮಿಯಾಳೆ ಕೆಲ ವರುಷ,
ಮಳೆಯೆ ಬರದಾಯ್ತು.
ಬೆಳೆಯಿಲ್ಲದೆಹೋಯ್ತು.
ಅರಸ ಬಹಳ ಮರುಗೀ
ಅಯ್ಯಗಳಡಿ ಗೆರಗೀ-
ಕ್ಷಾಮ ಹೋಗುವಂಥಾ-
ನೇಮ ಹೇಳಿರೆಂದ.
“ಕೇಳೊ ರಾಜ” ಎಂದು
ಹೇಳಿದ ರವರಂದು:
“ಆ ವಿಭಾಡಕನಿಗೇ
ಓರ್ವನೆ ಮಗನಾಗೆ,
ಅವನು ಬಾಲ್ಯದಲ್ಲೇ
ಅಡವಿಗ್ಹೋದ ನಲ್ಲೇ.
ಈ ವಿಚಿತ್ರವನ್ನೂ
ಯಾವರರಿಯರಿನ್ನೂ.
ಆತನಿಹಲ್ಲೆಲ್ಲಾ,
ಕ್ಷಾಮ ಬರುವುದಿಲ್ಲ.”

* * *



ಕೇಳಿ ರಾಜ ಕೆಲ ರಮಣಿಯರಾ
ಯೋಗಿಯು ಕರೆತರೆ ಕಳುಹಿಸಿದ.
ಅವರತಿಸಿಂಗರ ಸಂಬರದೀ
ಅಡವಿಗೆ ನಡೆದರು ಒಯ್ಯಾರದಿ
ಅತ್ತರು ಸುಗಂಧ ಘಮಘಮಕೇ,
ಆಟಪಾಟಗಳ ಕಲಕಲಕೇ,
ಆ ಮುನಿ ನೋಡಿದ ಕಂದೆರೆದು,
ಬೆರಗಾಗೆಣಿಸಿದ ನಿಂತೆಂದು:
"ಇದು ಯಾರೋ ಓ! ಏನ್ ಚಿತ್ರ!
ಮೋದದ ಮೋಡಿಯ ನರಗಾತ್ರ!
ಆಟ ಪಾಟಗಳ ನಾಡುವುವೇ!

ಕಲಕಲೆಂದು ಥಳಥಳಿಸುವುವೇ!
ಮೈಯಲಿ ಹೊದ್ದುದು ಹಾರುವುದೇ!
ಕೈಯಲಿ ಮುಟ್ಟೋಣೆನಿಸುವುದೇ!
ಘಮ್ಮನೆ ಮೂಗಿಗೆ ಹಿತವಾಹಾ!
ರಮ್ಮನೆ ಹಾರ್ವಾಕೇಶವಹಾ!
ಬೆರಳಿಂ ತೀಡೋಣೆನಿಸುವುದೇ!
ಕೊರಳಾ ದನಿಯೇ ನಿಂಪಿಹುದೇ!
ನೆರಳಿಗೆ ಸರಿಯೋಣೆನಿಸುವುದೇ!
ನರುಸೊದೆ ಜಿನುಜಿನು ಜಿನುಗುವುದೇ!
ಕಣ್ಣೂ ಮೂಗೂ ಬಾಯಿಗಳೂ
ನನ್ನಂತಿದ್ದರು ಚೆನ್ನಿಹವೇ!
ಫಳಫಳ ಪೊಳೆವಾ ಮೈಯೇನೊ!
ಥಳಥಳಿಸುವ ಆ ಸೊಬಗೇನೋ!

*  *  *

ಹೀಗೆಣಿಸುತ ಮುನಿ ಅವರೆಡೆ ಸರಿದ
ನಾಗವೇಣಿಯರ್ ನಗಲಿಂ ತೊರೆದ:
"ಓ ಓ ಸುಂದರ ಜೀವಿಗಳೇ!
ನಗುವನು ಸುರಿಸುವ ಹೂವುಗಳೇ!
ನರ್ತಿಸುವರ್ತಿಯು ನೀರೆಯರೇ!
ಇತ್ತ ಸರಿದು ಬಳಿ ಬನ್ನಿರೇ!"
ಕರೆದು ಇರಿಸಿ, ಮತ್ತೂ–ಅವರಿಗೆ
ಆತಿಥೇಯವಿತ್ತು
ಅವರು ತನಗೆ ಕೊಟ್ಟಾ–ತುಪ್ಪದ–
ಭಕ್ಷ್ಯಬೆಣ್ಣೆ ರೊಟ್ಟಿ,
ಲಡ್ಡುಗಳನು ತಿಂದು,–ಮೆಚ್ಚುತೆ–
ಮತ್ತೂ ಹೀಗೆಂದ:

" ನನ ತಪಸಿಗಿಂತ–ಆಹಾ !–
ನಿಮ್ಮದೆ ಹೆಚ್ಚೆಂತೊ !
ನನಗೆ ಕಲಿಸಿರದನು–ಪೇಳಿರೇ–
ನಿಮಗೆ ಸಾಧ್ಯವೇನು ?"
ಎಂದು ಕೇಳಲಾ ಚೆಲುವೆಯ ರೆಂದರು
ಮಂದಹಾಸವನು ಬಿಂಬಿಸುತ :
" ಸರಿ ನವ್ಮೊಡನಿನ್ನು–ಹೊರಡೀ–
ನಮ್ಮ ಮನೆಗೆ ಬನ್ನೀ"
ಎಂದು ಬೆಡಗಿ ನಡಿಯಿಂ–ಹೊರಟರು–
ಹಿಂದೆಯೆ ಮುನಿ ನಡೆದ.

*  *  *

ಅವನೆ ಋಷ್ಯಶೃಂಗ.
ಕ್ಷಾಮ ಹಾರಣಾಂಗ.
ಅವನು ಅಡಿಯನಿಟ್ಟಾ
ದೇಶಕೆ ಮಳೆಗೊಟ್ಟ.

ಭಾರಿಯ ಮಳೆ ಬಂತು.
ಭೂಮಿಗೆ ಕಳೆ ತಂತು.
ಭೂರಿ ಬೆಳೆಯ ಸಾಂತು,
ದೇಶಾನಂದಾಯ್ತು.
ರೋಮಪಾದ ತನ್ನ
ಪ್ರೇಮ ಕುವರಿಯನ್ನ
ಆ ಮುನಿವರಗಿತ್ತು
ಧನ್ಯನಾದ ನಂತು.

*  *  *

ಆ ಮುನಿಯನ್ನೆ ದಶರಥ ಯಾಗದ
ಕ್ಷೇಮಕಾಗಿಯೇ ಕರೆಸಿದನು.
ಪುತ್ರಕಾಮೇಷ್ಠಿ ಸಫಲಾಯ್ತು.
ಚಿತ್ರಭು ರಾಮೋದ್ಭವವಾಯ್ತು.
ದಿವ್ಯಕಾವ್ಯ ಮುಂದು,—ಶ್ರೀಮದ್—
ರಾಮಾಯಣವೆಂದು.



# ಮಾಮನ ಮಾತು

ಋತುಗಳಿಗೆಲ್ಲಾ ರಾಜ ವಸಂತಋತು. ಸೂರ್ಯದೇವನ ನಿಚ್ಚಳ ನೋಟವು ಪ್ರಾರಂಭವಾಗುವ ಕಾಲವು ಇದೇ. ಈ ಸಮಯದಲ್ಲಿಯೇ ಹಣ್ಣುಹಂಪಲುಗಳು ಹೆಚ್ಚು; ಅವುಗಳ ಉಪಯೋಗವೂ ಹೆಚ್ಚು. ವನಗಳೂ ಉದ್ಯಾನಗಳೂ ಬಣ್ಣಬಣ್ಣದ ಹೂಗಳಿಂದೊಪ್ಪುತ್ತ ಆಹ್ಲಾದಕರವಾಗಿರುತ್ತವೆ. ಈ ಆಹ್ಲಾದವನ್ನು ನಮಗೆ ಕೂಗಿ ಕರೆದು ಹೇಳುವುವೆಂದರೆ ವಿಧವಿಧವಾದ ಹಕ್ಕಿಪಕ್ಕಿಗಳು.

ಶಾಲಾ ಬಾಲಕರಿಗೂ ಉಬ್ಬರದ ಕಾಲವಿದು. ಸ್ವಲ್ಪ ಹಿಂದೆ ಮುಂದೆ ಪರೀಕ್ಷೆ, ಅನಂತರ ಬೇಸಗೆಯ ರಜೆ. ರಜೆ ಎಂಬ ಮಾತು ಕೇಳುತ್ತಲೇ ಏನೇನೋ ಸುಂದರ ಕಲ್ಪನೆಗಳು ಬರುತ್ತವಲ್ಲವೆ? ಶ್ರೀಮಂತ ಬಾಲಬಾಲೆಯರಿಗೆ ಉಲ್ಲಾಸ ಯಾತ್ರೆ—ದೂರದೂರಿಗೆ—ತಮ್ಮ ಕೌಟುಂಬಿಕರ ಮನೆಗೆ ಪ್ರಯಾಣ ಇತ್ಯಾದಿ. ಬಡ ಮಕ್ಕಳಿಗಾದರೂ ಅಷ್ಟೇ. ಗ್ರಾಮಗಳ ಚೆಲು ನೋಟಗಳನ್ನು ನೋಡುತ್ತ, ಹಿರಿಯರ ಕೆಲಸಗಳೊಂದಿಗೆ ಸಹಕಾರ ಮಾಡುತ್ತ ಹೊಸಹೊಸತುಗಳನ್ನು ಕಲಿಯುವ ಅವಕಾಶವಿದೆಯಲ್ಲವೆ? ಆದರೆ 'ಏಪ್ರಿಲ್ ಫೂಲ್' ಆಗದೆ ಜಾಗ್ರತೆಯಿಂದಿರಿ!

ಇನ್ನೀ ಸಂಚಿಕೆ ಬಿಡಿಸುವಾಗಲೇ ಏನೋ ವಿಶೇಷವಿರುವಂತೆ ಕಾಣಿಸುವುದಲ್ಲವೆ? ನಿಜ. 'ಆದಿಕಾವ್ಯ'ವೆಂದು ಹೆಸರಾಂತ ರಾಮಾಯಣದ ರಾಮನ ಜನ್ಮವಾದ 'ಶ್ರೀರಾಮನವಮಿ' ಹಬ್ಬ ಈ ತಿಂಗಳಿನಲ್ಲಿಯೇ. 'ಅಕಾರಾದಿ' ವಿಶೇಷಣದೊಂದಿಗೆ ಪ್ರಾರಂಭವಾದ ಈ ಸಂಚಿಕೆಯಲ್ಲಿ 'ವಿಧಿ- ವಿವಾಹ' ಕಥೆ ರಾಮಜನ್ಮಕ್ಕೇ ತಳಹದಿಯಂತಿದೆ. ವಿಧಿಯನ್ನು ಮೀರಲು ಎಂತಹನಿಗೂ ಸಾಧ್ಯವಿಲ್ಲವೆಂಬುದನ್ನು ಬಹಳ ಸ್ವಾರಸ್ಯವಾಗಿ ತಿಳಿಸುವ ಕಥೆಯಿದು. ಹಾಗೆಯೇ ಇಲ್ಲಿ ಅಲಂಕೃತವಾದ 'ಋಷ್ಯಶೃಂಗ' ಲಾವಣಿ ನಿಮ್ಮನ್ನು ತುಂಬಾ ಮೆಚ್ಚಿಸುವುದೆಂದು ನಂಬುತ್ತೇವೆ. ಇನ್ನೂ ಬೇರೆಬೇರೆ ಕಥೆಗಳನ್ನೂ ಅಣಿಗೊಳಿಸಿದ್ದೇವೆ. ಓದಿನೋಡಿ ಸ್ವಾರಸ್ಯ ಗ್ರಹಿಸಿರಿ. ಬಳಿಕ ನಿಮ್ಮ ತೃಪ್ತಿಯನ್ನು ನಮಗೆ ಎಂದಿನಂತೆ ತಿಳಿಸುವಿರಿತಾನೆ? ರಾಮನವಮಿಯ ತಣುಪಾನಕ ಕೋಸಂಬರಿಗಳ ಜತೆಯಲ್ಲಿ ಚಂದಮಾಮನೂ ಸೇರಿ ನಿಮ್ಮನ್ನೆಲ್ಲಾ ಸಂತೋಷಗೊಳಿಸುತ್ತಾನೆ.

ಈ ಸಲದ ಧಾರಾವಾಹಿ ಕಥೆ "ಧೂಮಕೇತು" ಮೂಬಣ್ಣ ಚಿತ್ರಗಳೊಂದಿಗೆ ನಿಮ್ಮೆಲ್ಲರನ್ನೂ ತುಂಬಾ ಮೆಚ್ಚಿಸಿರುವುದನ್ನು ತಿಳಿದು ನಮಗೆ ಬಹಳ ಸಂತೋಷವಾಗಿದೆ. ಹೇಳಿದಹಾಗೆ, ನಿಮಗೆಲ್ಲರಿಗೂ ನಮ್ಮ ಯುಗಾದಿಯ ಹರಕೆಗಳನ್ನೂ ಒಪ್ಪಿಸುತ್ತೇವೆ. ಎಲ್ಲರಿಗೂ ಶುಭವಾಗಲಿ!



# ಮೊದ್ದು ಮೊಸಳೆ

ಪೂರ್ವಕಾಲದಲ್ಲಿ ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸುತ್ತಿರುವಾಗ ಬೋಧಿಸತ್ವನು ಒಂದು ಕೋತಿಯಾಗಿ ಜನಿಸಿದನು. ಗಂಗಾನದಿತೀರದಲ್ಲಿ ಒಂದು ಅರಳಿಮರದ ಮೇಲೆ ತನ್ನ ನಿವಾಸವನ್ನು ಏರ್ಪಡಿಸಿಕೊಂಡನು. ಕ್ರೂರವೂ ಕುಟಿಲವೂ ಆದ ಮೊಸಳೆಗಳು ಅನೇಕವು ನದಿಯ ಪ್ರವಾಹದಲ್ಲಿ ತುಂಬಿ ವಿಹರಿಸುತ್ತಿದ್ದವು.

ದುಷ್ಟ ಮೊಸಳೆಗಳನ್ನು ಕುರಿತು ಜಾಗರೂಕತೆಯಿಂದ ಇರಬೇಕೆಂತಲೂ, ಮರದಿಂದ ಕೆಳಗೆ ಇಳಿಯಲೇ ಬಾರದೆಂತಲೂ ಬೋಧಿಸತ್ವನಾದ ಕೋತಿ ಇತರ ಕೋತಿಗಳಿಗೆ ಎಚ್ಚರಿಕೆ ಕೊಡುತಿತ್ತು.

ಒಂದು ದಿನ ನದಿಯಲ್ಲಿದ್ದ ತಾಯಿ ಮೊಸಳೆಯೊಂದು ತನ್ನ ಮಗನೊಂದಿಗೆ "ಮಗೂ, ನನಗೆ ಅನೇಕ ದಿನಗಳಿಂದ ಕೋತಿಯ ಹೃದಯವನ್ನು ತಿನ್ನಬೇಕೆಂಬ ಕೋರಿಕೆಯಿದೆ. ನನ್ನ ಆಶೆಯನ್ನು ತೀರಿಸಲಾರೆಯಾ?" ಎಂದು ಕೇಳಿತು. ಅದಕ್ಕೆ ಮೊಸಳೆಯ ಮರಿ ಅಮ್ಮಾ, ಕೋತಿಗಳು ತುಂಬಾ ತಿಳುವಳಿಕೆಯುಳ್ಳವು. ಹೇಗೆ ಅವುಗಳನ್ನು ಹಿಡಿಯಲು ಸಾಧ್ಯ?" ಎಂದು ತನ್ನ ಸಂಶಯವನ್ನು ಸೂಚಿಸಿತು. ಆದರೆ ತಾಯಿ ಮೊಸಳೆ ತರಲೇಬೇಕೆಂದು ಹಠಹಿಡಿಯಿತು. ಮೊಸಳೆ ಅರಳಿಮರದ ಸುತ್ತಲೂ ತಿರುಗಾಡಿತು. ಮೇಲಿದ್ದ ಕೋತಿಗಳು ಕೊಂಬೆ ರೆಂಬೆಗಳನ್ನು ಮುರಿದು ಅದರಮೇಲೆಸೆಯಲು ಪ್ರಾರಂಭಿಸಿದವು.

ಇದ್ದಕ್ಕಿದ್ದಂತೆ ಕೆಲವು ಮಂಗಗಳು ನೆಲದ ಸಮೀಪದಲ್ಲಿದ್ದ ಕೊಂಬೆಗಿಳಿದು ಬಂದವು. ಅವುಗಳೊಂದಿಗೆ ಮರಿಮೊಸಳೆ "ಎಲೈ ತಮ್ಮಂದಿರಾ, ಸದಾ ನೀವು ಆ ಮರದಮೇಲೆ ಕುಳಿತು ಕಾಲಕ್ಷೇಪ ಮಾಡುವುದಾಯಿತೇ ಹೊರತು, ಈ ಪ್ರಪಂಚದಲ್ಲಿರುವ ವಿಚಿತ್ರ ವಸ್ತುಗಳನ್ನು ನೋಡಿಯೇ ಇಲ್ಲ. ಈ ನದಿಯ ಮಧ್ಯೆ ಒಂದು ಸುಂದರವಾದ ದ್ವೀಪವಿದೆ. ಆ ದ್ವೀಪದಲ್ಲಿ ಸೊಗಸಾದ ಮಾವಿನ ಮರಗಳಿವೆ. ನನ್ನೊಂದಿಗೆ ಬನ್ನಿ, ತೋರಿಸುತ್ತೇನೆ" ಎಂದು ಸವಿಮಾತು ನುಡಿಯಿತು.

ಯಚ್. ನಾರಾಯಣರಾವ್



ಈ ಮಾತುಗಳನ್ನು ಕೇಳಿ ಕಪಿಗಳ ಬಾಯಲ್ಲಿ ನೀರೂರಿತು. "ಆದರೆ ಗೆಳೆಯನೇ, ನಮಗೆ ಈಜಲು ಬಾರದು. ನಾವೆಂತು ಅಲ್ಲಿ ತಲುಪಲು ಸಾಧ್ಯ?" ಎಂದು ಕೇಳಿದವು.

'ಅಯ್ಯೋ, ಅದೊಂದು ಸಮಸ್ಯೆಯೇ? ಬನ್ನಿ, ನನ್ನ ಬೆನ್ನಿನಮೇಲೆ ಹತ್ತಿ ಕುಳಿತು ಕೊಳ್ಳಿ. ನಿಮ್ಮನ್ನು ನಿಮಿಷಮಾತ್ರದಲ್ಲಿ ಆ ತೋಟದಲ್ಲಿ ಇಳಿಸುವೆನು" ಎಂದಿತು.

"ಸರಿ, ಹಾಗಾದರೆ ನನ್ನನ್ನು ಕರೆದು ಕೊಂಡು ಹೋಗು" ಎಂದು ಒಂದು ಪುಟಾಣಿ ಕೋತಿಮರಿ ಸಿದ್ಧವಾಯಿತು. ಉಳಿದ ಕಪಿ ಗಳು ಬೇಡಬೇಡವೆಂದು ಆ ಮರಿಗೆ ಬುದ್ಧಿ ಹೇಳಿದವು. ಆದರೆ ಅದು ಕಿವಿಗೆ ಹಾಕಿಕೊಳ್ಳ ಲಿಲ್ಲ. "ಮೊಸಳೆ ಮೋಸಗಾತಿ, ಹುಷಾರ್"

ಎಂದು ಅವು ಹಿತವಚನ ನುಡಿದರೂ, ಉತ್ಸಾಹ ಭರದಲ್ಲಿದ್ದ ಕಪಿಮರಿ ಅದನ್ನು ಲೆಕ್ಕಿಸಲಿಲ್ಲ. ಬಹು ಉತ್ಸಾಹದಿಂದ ಆ ಮರಿ ಮೊಸಳೆ ನದಿಯಲ್ಲಿ ಈಜಿಕೊಂಡು ಹೋಗು ತಿತ್ತು. ಹಾಗೆ ಹೋಗುತ್ತಾ ಹೋಗುತ್ತಾ ಧುಡುಮ್ಮನೆ ನೀರಿ ನೊಳಕ್ಕೆ ಮುಳುಗಿತು.

ಆಗ ಕಪಿಮರಿ ತನ್ನ ಕೈ ಮತ್ತು ಕಾಲು ಗಳಿಂದ ಮೊಸಳೆಯನ್ನು ಗಟ್ಟಿಯಾಗಿ ತಬ್ಬಿ ಕೊಂಡಿತು. ಅದಕ್ಕೆ ಉಸಿರು ಸಿಕ್ಕಿ ಕೊಂಡಂತಾಯಿತು.

ಮರಿ ಮೊಸಳೆ ಒಂದುಸಾರಿ ಮೇಲಕ್ಕೆ ಬಂತು. ಮೈಯೆಲ್ಲಾ ಒದ್ದೆಯಾಗಿದ್ದ ಕಪಿಮರಿ ಕಣ್ಣು ಒರಸಿಕೊಂಡು, "ಮೊಸಳೆಯೇ, ಹೀಗೇಕೆ ಮಾಡಿದೆ?" ಎಂದು ಕೇಳಿತು.

"ನಿನ್ನನ್ನು ನಾನು ಸಾಯಿಸುವೆನು" ಎಂದು ಶಾಂತವಾಗಿ ನುಡಿಯಿತು ಮೊಸಳೆ.

"ಏಕೆ ನನ್ನನ್ನು ಸಾಯಿಸುವೆ? ಗೆಳೆಯ ನೆಂದು ನಿನ್ನನ್ನು ನಂಬಿ ಬಂದೆನಲ್ಲಾ" ಎಂದು ಕೇಳಿತು ಕಪಿಮರಿ ಅಮಾಯಕತೆಯಿಂದ.

"ಏಕೇನು? ನಮ್ಮ ತಾಯಿಗೆ ಬಹಳ ದಿನಗಳಿಂದ ಕಪಿಯ ಹೃದಯವನ್ನು ತಿನ್ನ ಬೇಕೆಂಬ ಅಭಿಲಾಷೆಯಂತೆ. ನಿನ್ನನ್ನು ಕರೆದುಕೊಂಡು ಹೋಗಿ ನಮ್ಮ ತಾಯಿಗೆ ಒಪ್ಪಿಸುವೆನು"

"ಎಲೆ ಹುಚ್ಚಪ್ಪಾ! ಈ ಮಾತು ನನಗೆ ಆಗಲೇ ಹೇಳಬಾರದಿತ್ತೇ? ನೀನು ಮಾವಿನ ಹಣ್ಣಿನ ಮಾತು ಹೇಳಿದಕೂಡಲೇ ನಾನು

ನೆಟ್ಟಗೆ ಬಂದುಬಿಟ್ಟೆ. ನನ್ನ ಹೃದಯ ಆ ಮರದಮೇಲೆಯೇ ಉಳಿಯಿತು ”

ಈ ಮಾತು ಕೇಳಿ ಆ ಮರಿಮೊಸಳೆ ಪೆಚ್ಚಾಯಿತು. “ ಹಾಗಾದರೆ ಈಗ ನಿನ್ನ ಹೃದಯ ನಿನ್ನೊಂದಿಗೆ ಇರುವುದಿಲ್ಲವೆ?” ಎಂದು ವಿಚಾರದಿಂದ ಕೇಳಿತು.

“ ಅದನ್ನು ಯಾವಾಗಲೂ ಮರಕ್ಕೆ ತೂಗಹಾಕಿ ಭದ್ರವಾಗಿ ಕಾಪಾಡುತ್ತೇನೆ. ಅಗತ್ಯವಿಲ್ಲದಿದ್ದಾಗ ಅದನ್ನು ಹೊರಗೆ ತರುವುದಿಲ್ಲ! ನಿನಗೆ ಮುಖ್ಯವಾಗಿ ನನ್ನ ಹೃದಯ ಬೇಕಾಗಿದ್ದರೆ ನಾನು ಮತ್ತೆ ಮರದ ಹತ್ತಿರ ಹೋಗಬೇಕು. ಆದರೆ ನಾವು ಆ ದ್ವೀಪದ ಸಮೀಪಕ್ಕೆ ಬಂದಂತೆ ತೋರುವುದು. ನನ್ನನ್ನು ಇಲ್ಲಿ ಇಳಿಸು. ಕೆಲವು ಹಣ್ಣುಗಳನ್ನು ತಿಂದು ಬಂದುಬಿಡುವೆನು” ಎಂದಿತು ಕೋತಿಮರಿ.

“ ಊಹೂಂ. ಅದಾಗದು. ಹಣ್ಣನ್ನು ತರುವಾಯ ತಿನ್ನಬಹುದು. ಮೊದಲು ನಿನ್ನ ಹೃದಯ ನನಗೆ ಬೇಕು. ನಡೆ, ಮರದ ಹತ್ತಿರಕ್ಕೆ ಹೋಗೋಣ” ಎಂದು ಚಡಪಡಿಸಿ, ಗಬಗಬನೆ ಕಪಿಮರಿಯನ್ನು ಹೊತ್ತುಕೊಂಡು ಹೋಗಿ ಮರದ ಹತ್ತಿರ ಇಳಿಸಿತು ಮರಿಮೊಸಳೆ.

ಕಪಿಯ ಮರಿ ಚಂಗನೆ ಮರದಮೇಲಕ್ಕೆ ಹಾರಿತು. ಮೇಲೆ ಕುಳಿತು ಕಿಚಕಿಚ ಕಿರಿಯುತ್ತಾ “ ಎಲೆ, ತಿಳಿಗೇಡಿಯೇ, ಬಾ, ಮೇಲಕ್ಕೆ ಬಾ, ನನ್ನ ಹೃದಯ ಬೇಕೇನು? ಕೊಡುತ್ತೇನೆ. ತೆಗೆದುಕೊಂಡು ಹೋಗುವೆ



ಯಂತೆ!” ಎಂದು ಪರಿಹಾಸಮಾಡಿತು. ಮೊಸಳೆಮರಿ ತನ್ನಮೇಲೆ ಹಗೆಸಾಧಿಸುವುದೆಂದು ಕಪಿಮರಿಗೆ ಗೊತ್ತು. ಈ ಮರದ ಮೇಲಿದ್ದರೆ ಮುಪ್ಪು ಖಂಡಿತವೆಂದು, ಅದು ದೂರದಲ್ಲಿದ್ದ ಮತ್ತೊಂದು ಮರದಮೇಲೆ ವಾಸಮಾಡತೊಡಗಿತು. ಮೊಸಳೆ ಕಪಿಮರಿ ಸ್ಥಳ ಬದಲಾಯಿಸಿದುದನ್ನು ತಿಳಿದುಕೊಂಡಿತು. ಸಂಭ್ರಮದಿಂದ ಹಗಲೆಲ್ಲಾ ಅದು ಆ ದಡದಲ್ಲೇ ಕಾದು ಕುಳಿತಿತ್ತು.

ನದಿಯ ನಡುವೆ ಮತ್ತೊಂದು ದ್ವೀಪವಿತ್ತು. ಆ ದ್ವೀಪದಲ್ಲಿ ಮೇಲು ಜಾತಿಯ ಸೀಬೆಕಾಯಿಯ ಮರಗಳಿದ್ದವು. ಆ ಮರಗಳ ತುಂಬಾ ಹಣ್ಣುಗಳು ಕಳಕಳಿಸುತ್ತಾ, ಘಮ್ಮೆಂದು ವಾಸನೆ ಬೀರುತ್ತಿತ್ತು. ಆ

ದ್ವೀಪಕ್ಕೂ, ನದಿಯ ದಡಕ್ಕೂ ನಡುವೆ ಒಂದು ಕಲ್ಲು ಚಪ್ಪಡಿಹಾಕಿತ್ತು. ಕಪಿಮರಿ ಆ ದ್ವೀಪಕ್ಕೆ ಹೋಗಬೇಕೆಂಬ ಕುತೂಹಲ ದಿಂದ ಆ ಚಪ್ಪಡಿಯ ಮೇಲೆ ಹಾರಿ, ಅಲ್ಲಿಂದ ಒಂದು ನೆಗೆತ ನೆಗೆದು, ಆ ದ್ವೀಪಕ್ಕೆ ಹೋಗಿ, ಹೊಟ್ಟೆ ಬಿರಿಯುವಷ್ಟು ಹಣ್ಣುಗಳನ್ನು ತಿಂದಿತು.

ಮರಿಮೊಸಳೆ ನದಿಯಲ್ಲಿ ಅಡಗಿದ್ದು ಕಪಿಯ ಚಲನವಲನಗಳನ್ನು ನೋಡುತಿತ್ತು. ಕೋತಿ ಮರಿ ಹಿಂತಿರುಗಿ ಬರುವಾಗ ಅದನ್ನು ಹಿಡಿಯ ಬೇಕೆಂದು ಅದರ ಹಂಚಿಕೆ.

ಕತ್ತಲಾಗಿದೆ. ಹೊಟ್ಟೆ ತುಂಬಾ ಹಣ್ಣು ತಿಂದ ಆ ಕಪಿಮರಿ ಮೆಲ್ಲನೆ ದ್ವೀಪದಿಂದ ಮತ್ತೆ ಕಲ್ಲುಚಪ್ಪಡಿಯ ಮೇಲಕ್ಕೆ ಬಂತು. ಆದರೆ ಬೆಳಗ್ಗೆ ಇದ್ದುದಕ್ಕಿಂತಲೂ ಈಗ ಆ ಚಪ್ಪಡಿ ಅಗಲವಾಗಿರುವಂತೆ ಕಂಡುಬರಲು 'ಹಾಳು, ಯಾವುದಾದರೂ ಮೊಸಳೆ ಮಲಗಿ ಕೊಂಡಿಲ್ಲತಾನೇ? ಏನೋ. ಯಾರು ಬಲ್ಲರು, ಈ ನಸು ಕತ್ತಲೆಯಲ್ಲಿ' ಎಂದು ಅನುಮಾನ ಪಟ್ಟಿತು ಕಪಿಮರಿ. ಬೇಕೆಂತಲೇ ಕಿರಿಚಿತು. ನೆನೆಸಿದ್ದಂತೆಯೇ ಸ್ವಲ್ಪ ಹೊತ್ತಿಗೆ ಮೊಸಳೆ ಮಿಸುಕಾಡಿ ಬಾಯಿ ತೆರೆಯಿತು. 'ಅರೆ· ನಿನ್ನ ಮನೆ ಹಾಳಾಗ, ನೆನೆಸಿದಂತೆ ಆಯಿ ತಲ್ಲಾ ! ಸರಿ, ಇನ್ನು ಹೇಗೂ ನಿನ್ನ ಬಲೆಯಲ್ಲಿ ಬಿದ್ದೆ. ತೆರೆ, ನಿನ್ನ ಬಾಯಿ, ಅದರಲ್ಲಿ ನಗ್ಗು ತ್ತೇನೆ" ಎಂದಿತು ಕಪಿ.

ಮೊಸಳೆ ಬಾಯಿ ತೆರೆದಾಗ ಕಣ್ಣು ಮುಚ್ಚಿ ಕೊಳ್ಳುತ್ತದೆ. ಈ ಗುಟ್ಟು ಆ ಬುದ್ಧಿಶಾಲಿ ಕಪಿಮರಿಗೆ ತಿಳಿದಿತ್ತು.

ಸಂತೋಷದಿಂದ ಮರಿಮೊಸಳೆ ಅಗಲ ವಾಗಿ ಬಾಯಿ ತೆರೆಯಿತು. ಕಪಿಮರಿ ಒಂದು ನೆಗೆತ ನೆಗೆಯಿತು. ಎಲ್ಲಿಗೆ?

ಮೊಸಳೆಯ ಬಾಯೊಳಕ್ಕೆ ಅಲ್ಲ, ಅದರ ತಲೆಯಮೇಲಕ್ಕೆ! ಇನ್ನೊಂದು ಹಾರಿಗೆ ಅದು ತನ್ನ ನಿವಾಸವೇರ್ಪಡಿಸಿಕೊಂಡಿದ್ದ ಮರದ ಮೇಲಕ್ಕೆ ಹಾರಿ, ಕ್ಷೇಮವಾಗಿ ಕೊಂಬೆಯನ್ನು ಸೇರಿಕೊಂಡಿತು.

ಪೆಚ್ಚಾಯಿತು ಮರಿಮೊಸಳೆ. "ಎಲೆ, ತಿಳಿಗೇಡಿಯೇ, ನೀನೋ ನನ್ನಮೇಲೆ ಸೇಡು ತೀರಿಸಿಕೊಳ್ಳುವುದು?" ಎಂದು ತುಟ್ಟ ತುದಿಯ ಕೊಂಬೆಯಮೇಲೆ ಹೋಗಿ ಮೊಸಳೆ ಯನ್ನು ಮೂದಲಿಸಿತು, ಕಪಿಮರಿ.





# ಮಾಮೂಲು

ಶಾನುಭೋಗ ಶೀನಪ್ಪನವರೆಂದರೆ ಅಗ್ರಹಾರದಲ್ಲಿ ಎಲ್ಲರಿಗೂ ಹೆದರಿಕೆ. ಉನ್ನತ ಅಧಿಕಾರಿಗಳೂಸಹ ಶೀನಪ್ಪನವರ ಹೆಸರು ಹೇಳಿದರೆ ಸಾಕು ಭಯಪಡುವರು.

ಆ ಊರಿಗೆ ಒಂದು ಸಾರಿ ಪ್ರಸಿದ್ಧ ಜೋತಿಷ್ಕನೊಬ್ಬನು ಬಂದ. ಊರಿನ ಹಿರಿಯರೆಲ್ಲರ ಜಾತಕಗಳನ್ನೂ, ಹಸ್ತಗಳನ್ನೂ ನೋಡಿ, ಭವಿಷ್ಯ ನುಡಿದು ಅನೇಕ ಬಹುಮಾನಗಳನ್ನೂ ಅವರಿಂದಪಡೆದ. ಕಡೆಯಲ್ಲಿ ಶಾನುಭೋಗರ ದರ್ಶನಕ್ಕೆ ಹೊರಟ.

ಶಾನುಭೋಗರು ಮನೆಯ ಜಗಲಿಯ ಮೇಲೆ ಕುಳಿತು ಏನೋ ಲೆಕ್ಕ ಬರೆದುಕೊಳ್ಳುತ್ತಿದ್ದರು. 'ನಮಸ್ಕಾರ ಸ್ವಾಮಿ' ಎಂದ ಜೋತಿಷ್ಕ. 'ಓ, ತಾವ್ವೋ, ದಯಮಾಡಿಸಬೇಕು, ದಯಮಾಡಿಸಬೇಕು' ಎಂದು ಲೇಖನಿಯನ್ನು ಕೆಳಗಿಡುತ್ತಾ, ಗಂಭೀರವಾಗಿ ನುಡಿದರು ಶೀನಪ್ಪ. ಜೋತಿಷ್ಕನು ತಾನು ಬಂದ ಕಾರ್ಯವನ್ನು ತಿಳಿಸಿ, ಶಾನುಭೋಗರ ಹಸ್ತ ನೋಡಲು, ಕೈಗೆ ತೆಗೆದುಕೊಂಡು, ಅಪರಿಮಿತವಾದ ಆಸಕ್ತಿಯಿಂದ ಪ್ರಾರಂಭಿಸಿದ: 'ಅಹ್ಹಹ್ಹ, ಎಂಥ ಸೊಗಸಾದ ಹಸ್ತ! ಶನಿ ಏಳನೇ ಮನೆಯಲ್ಲಿ ಪ್ರವೇಶಿಸಿರುವುದರಿಂದ ನೀವು ಧೀಮಂತರಾದಿರಿ. ಸಾರ್ವಭೌಮಪದವಿಯನ್ನು ಅಲಂಕರಿಸಬೇಕಾದ ದಿವ್ಯವಾದ ಜಾತಕ. ಆದುದರಿಂದಲೇ ನಮ್ಮ ಈ ಗ್ರಾಮಕ್ಕೆ ಮುಕುಟರಹಿತ ಮಹಾರಾಜರಾದಿರಿ' ಎಂದು ಹೀಗೇ ಹೇಳುತ್ತಾ ಬಂದ.

ನೋಡಿದ್ದೆಲ್ಲಾ ಆದ ತರುವಾಯ 'ಹಸ್ತ ನೋಡಲು ನಿಮ್ಮ ಮಾಮೂಲು ಎಷ್ಟು?' ಎಂದು ಕೇಳಿದರು ಶೀನಪ್ಪ.

'ಅದೇನು ಬಿಡಿ. ಅವರವರ ಖುಷಿಮೇಲೆ ಹೋಗುತ್ತದೆ. ತೀರಾ ಬಡವರೂ ನಾಲ್ಕು ರೂಪಾಯಿ ಕೊಟ್ಟರು. ಧರ್ಮ ಪ್ರಭುಗಳು, ಗ್ರಾಮಕ್ಕೇ ದಣಿ. ನಿಮ್ಮಹತ್ತಿರ ಚೌಕಾಸಿ ಎಂತಹದು' ಎಂದ ಆ ಜೋತಿಷ್ಕ.

'ಅಲ್ಲಾ, ಮುನಸೀಪರು, ಅಮಲ್ದಾರರು, ಮಂಡಿ ಭೀಮಪ್ಪ ಮುಂತಾದ ಗಣ್ಯರನ್ನೆಲ್ಲಾ ಏಕೆ ನೋಡಲಿಲ್ಲ?'' ಶೀನಪ್ಪ ಕೇಳಿದರು.

ಜಿ. ವೀರಪ್ಪ, ಹುಬ್ಬಳ್ಳಿ

" ಕ್ಷಮಿಸಬೇಕು. ಅವರನ್ನೆಲ್ಲಾ ನೋಡಿ ಆಯಿತು. ಅವರದೆಲ್ಲಾ ಮುಗಿಸಿಕೊಂಡು ತಮ್ಮಲ್ಲಿಗೆ ಬಂದೆ."

'ಹಾಗಾದರೆ ಎಷ್ಟು ವಸೂಲಾಯಿತು?'

'ಈ ಒಂದೂವರೆ ತಿಂಗಳಿಂದ ಈ ಅಗ್ರಹಾರದ ಸುತ್ತಮುತ್ತ ಸಂಚರಿಸುತ್ತಿದ್ದೇನೆ. ನಿಜ ಹೇಳಬೇಕೆಂದರೆ ಈ ಗ್ರಾಮುಗಳಲ್ಲಿ ಲಕ್ಷ್ಮಿ ಪ್ರಸನ್ನಳಾಗಿದ್ದಾಳೆ. ಅದರಲ್ಲೂ ನಮ್ಮ ಗ್ರಾಮುವಲ್ಲಿ ಆದರೋಪಚಾರ ಹೆಚ್ಚು. ಮಹಾ ಮಹಾ ಪೋಷಕರೆಲ್ಲಾ ಇಲ್ಲೇ ಇದ್ದಾರೆ.'

'ಅಯ್ಯಾ, ನಿನಗೆ ಏನೋ ಒಂದಿಷ್ಟು ಲಭಿಸಿದರೆ ನಮಗೆ ಬಹಳ ಸಂತೋಷ. ನಮ್ಮ ಗ್ರಾಮುಕ್ಕೆ ನಿಮ್ಮಂತಹ ವಿದ್ವಾಂಸರು ಬಂದರೆ ಪ್ರೋತ್ಸಾಹ ಕೊಡಬೇಡವೇ?' ಎಂದು ರಾಗ ತೆಗೆದರು ಶಾನುಭೋಗರು.

ಈ ಮಾತು ಕೇಳಿ ಜೋತಿಷ್ಕ ಉಬ್ಬಿಹೋದ. 'ಮುಚ್ಚುಮರೆ ಏಕೆ ಪ್ರಭು, ಸುಮಾರು ಇನ್ನೂರು ರೂಪಾಯಿ ಗಿಟ್ಟಿತು' ಎಂದ ಏನೂ ಬಿಟ್ಟುಕೊಡದೆ. ಒಡನೇ ಶೀನಪ್ಪನವರು ತಲೆ ಯಾಡಿಸ ಕೊಂಡು ನಗುತ್ತಾ "ಭಲೇ ಭೇಷ್. ಹೆಳಲೇ ಇಲ್ಲವಲ್ಲಾ ಯ್ಯಾ ನೀನು. ಹಾಗಾದರೆ ರೂಪಾಯಿಗೆ ಐದು ಕಾಸಿನಂತೆ ಶಾನುಭೋಗರ ಮಾಮೂಲು ಐದು ರೂಪಾಯಿ ನಾಲ್ಕಾಣೆ ಬಂದುಬಿಡಲಿ. ಮಾಮೂಲು ಕೊಡಲೇಬೇಕೆನ್ನುವ ವಿಷಯ ಪ್ರತಿ ಸಣ್ಣ ಹುಡುಗನಿಗೂ ತಿಳಿದಿರುವ ಸಂಗತಿ. ಇದರಲ್ಲಿ ನಿನ್ನ ರುಸುಮು ನಾಲ್ಕು ರೂಪಾಯಿ ವಜಾ ಮಾಡಿಕೊಂಡು ರೂಪಾಯಿ, ಚಿಲ್ಲರೆ ಇಟ್ಟು ಬಿಡು. ಎಲ್ಲಾ ಸರಿಹೋಗುತ್ತದೆ' ಎಂದು ಹೇಳಿದರು.

ಸ್ತಬ್ಧನಾದ ಜೋತಿಷ್ಕ. ಏನು ಹೇಳಲಿಕ್ಕೂ ಅವನಿಗೆ ತೋರಲಿಲ್ಲ. ಶಾನುಭೋಗರ ಹತ್ತಿರ ಇದ್ದರೆ ಇನ್ನೇನು ಅವಾಂತರವಾಗುವುದೋ ಎಂಬ ಭಯದಿಂದ ಆತನು ಒಂದೂ ಕಾಲು ರೂಪಾಯಿ ಕೂಡಲೇ ಕೊಟ್ಟುಬಿಟ್ಟು ತುಟಿಪಿಟಕ್ಕೆನ್ನದೆ ಅಲ್ಲಿಂದ ಕಾಲುತೆಗೆದ.

ಅಂದಿನಿಂದ ಜೋತಿಷ್ಕನು ಬೇರೆ ಯಾರಿಗಾದರೂ ಕೈ ನೋಡುತ್ತಾನೆಯೇ ಹೊರತು ಶಾನುಭೋಗರೆಂದರೆ ಸಾಕು, ಅರ್ಧ ಮೈಲು ದೂರದಲ್ಲೇ ಇರುತ್ತಿದ್ದ.






**ಚಂ**ದ್ರನಗರಕ್ಕೆ ಆನಂದಗಜಪತಿ ರಾಜ. ಆತನ ಸಚಿವನ ಹೆಸರು ಸ್ಥಿರಬುದ್ಧಿ. ಸ್ಥಿರ ಬುದ್ಧಿ ಮಹಾಮೇಧಾವಿ. ಆತನ ಬುದ್ಧಿ ವಂತಿಕೆಯಿಂದಲೇ ಪ್ರಜೆಗಳು ಸುಖವಾಗಿಯೂ ಆನಂದವಾಗಿಯೂ ಇದ್ದರು.

ಒಂದು ದಿನ ಗಜಪತಿಗೆ ಎದೆನೋವುಂಟಾಯಿತು. ಭಾರಿ ಭಾರಿ ವೈದ್ಯರೆಲ್ಲಾ ಆಶೆ ಬಿಟ್ಟುಬಿಟ್ಟರು. ಕೊನೆಗೆ ರಾಮಪ್ಪನೆಂಬ ನಾಡು ವೈದ್ಯನು ಬಂದು, ರಾಜನ ಕಾಯಿಲೆಯನ್ನು ಮೂರು ದಿನಗಳಲ್ಲಿ ಗುಣಪಡಿಸಿದನು. ರಾಮಯ್ಯನ ಸಾಮರ್ಥ್ಯಕ್ಕೆ ಮೆಚ್ಚಿ, ರಾಜನು ಆತನನ್ನು ತನ್ನ ಆಸ್ಥಾನವೈದ್ಯನನ್ನಾಗಿ ನೇಮಿಸಿದ. ಅಂದಿನಿಂದ ರಾಮಯ್ಯ ತುಂಬಾ ಕೀರ್ತಿಶಾಲಿಯಾದ.

ಕೆಲವು ದಿನಗಳನಂತರ ರಾಣಿಗೂ ಕಾಯಿಲೆ ಬಂತು. ಆಗಲೂಸಹ ರಾಮಯ್ಯನ ವೇಳಾವಿಶೇಷದಿಂದಲೋ, ಇಲ್ಲ ರಾಣಿಯ ಆಯುಸ್ಸು ಗಟ್ಟಿಯಾಗಿದ್ದುದರಿಂದಲೋ ಎರಡೇ ತಿಂಗಳಲ್ಲಿ ಆಕೆಯ ರೋಗ ವಾಸಿಆಯಿತು. ಮತ್ತೆ ಕೇಳಬೇಕೆ? ಅಂದಿನಿಂದ ರಾಮಯ್ಯನ ಸಂಬಳ ಹೆಚ್ಚುಮಾಡಿದ ರಾಜ.

ಹಳ್ಳಿಗಾಡಿನ ನಾಡುವೈದ್ಯ ರಾಮಯ್ಯನಿಗೆ ಇಷ್ಟು ಬೇಗ ಕೀರ್ತಿ ಮತ್ತು ಧನಸಂಪಾದನೆ ಲಭಿಸಿದುದರಿಂದ ಆತನಿಗೆ ಅಹಂಕಾರ ಬಂತು. ಎಲ್ಲರನ್ನೂ ಅಲಕ್ಷ್ಯಮಾಡುತ್ತಿದ್ದ. 'ರಾಜ ಮತ್ತು ರಾಣಿಯನ್ನು ಮೃತ್ಯುವಿನ ದವಡೆಯಿಂದ ಕಾಪಾಡಿದ ದೇವರು ನಾನು' ಎಂದು ಬಡಾಯಿಕೊಚ್ಚಿಕೊಳ್ಳುತ್ತಿದ್ದ.

ಅರಸನ ವೈದ್ಯಶಾಲೆಗೆ ಹೋಗಿ, ರೋಗಿಗಳನ್ನು ಪರೀಕ್ಷಿಸಿ ಔಷಧಿ ಕೊಡುತ್ತಿದ್ದ ರಾಮಯ್ಯ, ದಿನ ಕಳೆದಂತೆ ತನ್ನಿಷ್ಟಬಂದಾಗ ವೈದ್ಯಶಾಲೆಗೆ ಹೋಗಲು ಪ್ರಾರಂಭಿಸಿದ. ಪ್ರತಿ ತಿಂಗಳೂ ವೈದ್ಯಶಾಲೆಯ ಖರ್ಚಿಗೆ ರಾಜನು ಕೊಡುತ್ತಿದ್ದ ಐನೂರು ರೂಪಾಯಿಗಳಿಗೆ ಔಷಧಿ ಕೊಂಡುಕೊಂಡು, ತನ್ನ ಮನೆಗೆ ಬರುವ ರೋಗಿಗಳಿಗೆ ಕೊಟ್ಟು ಅವರಿಂದ ಹಣ ಪಡೆಯುತ್ತಿದ್ದ. ಇದು ರಾಜನಿಗೆ ತಿಳಿಯದು. ಹೀಗೇ ಸ್ವಲ್ಪದಿನಗಳಾದಮೇಲೆ

ಎಂ. ಆರ್. ಹೊಸದುರ್ಗ




ವೈದ್ಯಶಾಲೆಯಲ್ಲಿದ್ದ ರೋಗಿಗಳೆಲ್ಲಾ ಒಂದಾಗಿ ರಾಮಯ್ಯನ ಮೇಲೆ ರಾಜನಿಗೆ ರಹಸ್ಯವಾಗಿ ಅರ್ಜಿ ಹಾಕಿದರು. ಆ ದೂರನ್ನು ರಾಜನು ಮಂತ್ರಿಗೆ ತೋರಿಸಿದ. ಮಂತ್ರಿಯ ಸಲಹೆಯಂತೆ ಮೊದಲನೆಯ ಅಪರಾಧವೆಂದು ಎಣಿಸಿ, ರಾಜನು ರಾಮಯ್ಯನಮೇಲೆ ಯಾವ ಕ್ರಮವನ್ನೂ ಆಗ ತೆಗೆದುಕೊಳ್ಳಲಿಲ್ಲ.

ಮತ್ತೆ ಕೆಲವು ದಿನಗಳು ಜಾರಿದವು. ರಾಮಯ್ಯ ತನಗೆ ಕೊಡುತ್ತಿರುವ ಸಂಬಳ ಸಾಲದೆಂದೂ, ತನ್ನ ವೈದ್ಯಶಾಲೆಗೆ ಬರುವ ರೋಗಿಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಿದೆಯೆಂತಲೂ, ರೋಗಿಗಳಿಗಾಗಿ ವಿನಿಯೋಗಿಸಲು ಕೊಡುತ್ತಿರುವ ಹಣ ನಾಲ್ಕರಷ್ಟು ಹೆಚ್ಚುಮಾಡಿದಹೊರತು ವೈದ್ಯಶಾಲೆ ನಡೆಸುವುದು ಕಷ್ಟವಾಗುವುದೆಂತಲೂ ವಿವರಿಸಿಕೊಂಡು ರಾಜನಿಗೆ ಒಂದು ಅರ್ಜಿ ಸಲ್ಲಿಸಿದ.

ವೈದ್ಯಶಾಲೆಯ ಖರ್ಚಿಗೆ ಹೆಚ್ಚು ಹಣ ಬೇಕು ಎಂದು ಬಂದ ದರಖಾಸ್ತನ್ನು ನೋಡಿ ರಾಜ ಕುಪಿತನಾದ. ತಾನು ಮತ್ತು ಮಂತ್ರಿ ವೈದ್ಯಶಾಲೆಗೆ ಹೋಗಿ ಅಲ್ಲಿನ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದು ಉಚಿತವೆಂದು ತೋರಿತು ರಾಜನಿಗೆ. ಒಂದು ವಾರದೊಳಗೆ ತಾವು ವೈದ್ಯಶಾಲೆಗೆ ಬರುವುದಾಗಿ ರಾಮಯ್ಯನಿಗೆ ಸುದ್ದಿ ಕಳುಹಿಸಿದ.

ರಾಜನು ವೈದ್ಯಶಾಲೆಗೆ ನಾಳೆ ಬರುತ್ತಾನೆನ್ನಲು, ಇಷ್ಟುರವರೆವಿಗೂ ಕೆಲವೇ ಜನ ರೋಗಿಗಳಿದ್ದ ಆಸ್ಪತ್ರೆ ಈಗ ಹೇಗೋ ಅನೇಕ ರೋಗಿಗಳಿಂದ ತುಂಬಿಹೋಗಿತ್ತು.

ತಿಳಿಸಿದ ದಿನ ರಾಜನು ಮಂತ್ರಿಯೊಂದಿಗೆ ಆಸ್ಪತ್ರೆಗೆ ಬಂದು, ಮುಂದಿನ ಕೊಠಡಿಯಲ್ಲಿ ಕುಳಿತುಕೊಂಡ. ಔಷಧಿಯ ಖರ್ಚಿನ, ರೋಗಿಗಳ ಸಂಖ್ಯೆಯ ಪಟ್ಟಿಗಳನ್ನು ತನಿಖೆ ಮಾಡುತ್ತಾ ರಾಮಯ್ಯನನ್ನು ರಾಜನು ಮಾತಿನಲ್ಲಿ ಸಿಲುಕಿಸಿದ. ರಾಮಯ್ಯ ತನ್ನ ಸಂಬಳ ಮತ್ತು ವೈದ್ಯಶಾಲೆಯ ಖರ್ಚಿಗೆ ಹೆಚ್ಚು ಹಣ ಮಂಜೂರು ಮಾಡಬೇಕಾದ ಅಗತ್ಯ ಕುರಿತು ಅನೇಕ ರೀತಿ ಸಮಾಧಾನಗಳನ್ನು ಹೇಳುತ್ತಿದ್ದ. ರಾಜ ಮತ್ತು ರಾಮಯ್ಯರು ಸಂಭಾಷಣೆಯಲ್ಲಿ ತಲ್ಲೀನರಾಗಿರುವುದನ್ನು ಗ್ರಹಿಸಿ, ಮಂತ್ರಿ ಮೆಲ್ಲನೆ ಒಳಗೆ ಹಾಲಿನಲ್ಲಿದ್ದ ರೋಗಿಗಳ ಮಂಚದ ಹತ್ತಿರಕ್ಕೆ ಹೋದ.

ರಾಮಯ್ಯನ ಸಂಚನ್ನು ಕ್ಷಣಮಾತ್ರದಲ್ಲಿ ಆತನು ಕಂಡುಕೊಂಡ. ಅವನ ಮೋಸಕ್ಕೆ ತಕ್ಕ ಶಾಸ್ತಿಮಾಡಬೇಕೆಂದು ನಿರ್ಧರಿಸಿದ.

ಮೊತ್ತಮೊದಲನೆಯ ಮಂಚದ ಹತ್ತಿರಕ್ಕೆ ಹೋಗಿ 'ಅಯ್ಯಾ ನಿನ್ನ ಕಾಯಿಲೆ ಏನು? ಎಷ್ಟು ದಿನದಿಂದ ಇದೆ? ಇನ್ನೆಷ್ಟು ದಿನ ಹೀಗೆ ಮಂಚದಮೇಲೆ ಬಿದ್ದುಕೊಂಡು ಬಾಧೆಪಡುವೆ? ನನ್ನ ಹತ್ತಿರ ರಾಮಬಾಣದಂತಹ ಔಷಧಿಯೊಂದಿದೆ. ತೆಗೆದುಕೊಳ್ಳುವೆಯಾ?' ಎಂದು ಕೇಳಿದ.

'ಅಗತ್ಯವಾಗಿ, ಸ್ವಾಮಿ, ಅಗತ್ಯವಾಗಿ ತೆಗೆದುಕೊಳ್ಳುತ್ತೇನೆ' ಎಂದು ಉತ್ತರವಿತ್ತ ಆ ರೋಗಿ. ಅವನಲ್ಲಿ ದೈನ್ಯತೆಯಿತ್ತು. ಆಗ ಮಂತ್ರಿ 'ಇದು ಬಹಳ ರಹಸ್ಯವಾದುದು. ಯಾರಿಗೂ ಹೇಳುವುದಿಲ್ಲವೆಂದರೆ ಮಾತ್ರ ನಿನಗೆ ಹೇಳುತ್ತೇನೆ' ಎಂದ. 'ನಾನು ಯಾರೊಂದಿಗೂ ಹೇಳುವುದಿಲ್ಲ' ಎಂದು ಆ ರೋಗಿ ಮಂತ್ರಿಯ ಕೈಯಲ್ಲಿ ಕೈಯಿಟ್ಟು ನುಡಿದ. ಆಗ ಮಂತ್ರಿ 'ನನಗೆ ಈ ಚಿಕಿತ್ಸೆಯನ್ನು ಒಬ್ಬ ಸಿದ್ಧನು ಹೇಳಿದ. ಆತನು ಹಿಮಾಲಯ ಪರ್ವತದ ತಪ್ಪಲಿನಲ್ಲಿ ತನ್ನ ಜೀವಮಾನವನ್ನೆಲ್ಲಾ ಕಳೆದು, ಅದರ ಫಲಿತವಾಗಿ ಈ ವಿದ್ಯೆಯನ್ನು ಸಾಧಿಸಿ ತಾನು ಸಾಯುವ ಮುನ್ನ ನನಗೆ ಈ ರಹಸ್ಯವನ್ನು ತಿಳಿಸಿದ...' ಅಷ್ಟಕ್ಕೆ ಮಾತು ನಿಲ್ಲಿಸಿದ. 'ಅದೇನೋ ಸ್ವಲ್ಪ ಹೇಳಿಬಿಡಿ' ಎಂದು ಕಾತುರಸ್ವರದಲ್ಲಿ ಕೇಳಿದ ರೋಗಿ. ಅದಕ್ಕೆ




ಮಂತ್ರಿ ಮೆಲು ಧ್ವನಿಯಲ್ಲಿ 'ನಿಮ್ಮಲ್ಲಿ ಹೆಚ್ಚು ಕಾಯಿಲೆಯಿದ್ದು ಇನ್ನು ಉಳಿಯುವ ಆಶೆಯೇ ಇಲ್ಲದಿರುವ ರೋಗಿಯನ್ನು ಕೊಂದು, ಅವನನ್ನು ಸುಟ್ಟು, ಆ ಬೂದಿ ಅಂದರೆ ಭಸ್ಮವನ್ನು ಜೇನುತುಪ್ಪದಲ್ಲಿ ಕಲಸಿ ಮೂರು ದಿನ ಸೇವಿಸಿದರೆ ಸಕಲ ವ್ಯಾಧಿಗಳೂ ಮಾಯವಾಗುವುವು. ಮಾನವನ ಕಾಯಿಲೆಗೆ ಮಾನವನೇ ಔಷಧ. ಆದರೆ ಹಾಗೆ ಸಾಯಲು ಸಿದ್ಧನಾಗಿರುವ ರೋಗಿ ಯಾರಿದ್ದಾರೆಂಬುದೇ ಒಂದು ದೊಡ್ಡ ಪ್ರಶ್ನೆ. ಅಂತಹ ತ್ಯಾಗಿಯನ್ನು ಆರಿಸಿಕೊಳ್ಳಲು ನಿಮ್ಮ ವೈದ್ಯರಾದ ರಾಮಯ್ಯ ಹೊರಬಾಗಿಲಿನಲ್ಲಿ ನಿಂತು "ಕಾಯಿಲೆ ಇಲ್ಲದವರೆಲ್ಲಾ ಹೊರಗೆ ಬಂದು ಬಿಡಿ" ಎಂದು ಕೂಗಿ ಹೇಳಲು ಒಪ್ಪಿ

ಕೊಂಡಿದ್ದಾನೆ. ಆತನು ಕೂಗಿದಾಗ ಹೊರಗೆ ಬಾರದೆ ಒಳಗೆ ಉಳಿದಿರುವಾತನನ್ನು..." ಎಂದು ಹೇಳಿ ಸುಮ್ಮನಾದ ಮಂತ್ರಿ.

ಪ್ರತಿಯೊಬ್ಬ ರೋಗಿಯ ಹತ್ತಿರವೂ ಇದೇ ರೀತಿ ಹೇಳಿದುದಾಯಿತು. ರೋಗಿಗಳೆಲ್ಲರೂ ಆ ಸಿದ್ಧನ ದಿವ್ಯವಾದ ಔಷಧಿಯನ್ನು ತೆಗೆದುಕೊಳ್ಳಲು ಇಷ್ಟಪಟ್ಟರು. ಎಲ್ಲರನ್ನೂ ಒಪ್ಪಿಸಿದ ತರುವಾಯ ಮಂತ್ರಿ ರಾಜ ಮತ್ತು ರಾಮಯ್ಯರಿದ್ದ ಕೋಣೆಗೆ ಬಂದ. 'ರಾಮಯ್ಯಾ, ಮಹಾರಾಜರು ರೋಗಿಗಳನ್ನು ಸ್ವತಃ ನೋಡಲು ಬಂದರೆ ಅವರ ಕಾಲವನ್ನೆಲ್ಲಾ ನೀನೇ ಉಪಯೋಗಿಸಿಕೊಂಡುಬಿಟ್ಟೆ. ಈಗ ಅವರು ರೋಗಿಗಳನ್ನು ನೋಡಿ ನಿಧಾನವಾಗಿ ಮಾತನಾಡಲು ವ್ಯವಧಿಯಿಲ್ಲ. ಅಷ್ಟೇ ಅಲ್ಲದೆ, ರೋಗಿಗಳ ಬಳಿ ಅವರವರ ಬಂಧು ಬಳಗದವರು ಅನೇಕರಿರುವಂತಿದೆ. ಈಗಾಗಲೇ ಬಹಳ ಹೊತ್ತಾಯಿತು. ಆದುದರಿಂದ ನೀನು ಬಾಗಿಲ ಹತ್ತಿರನಿಂತು "ಕಾಯಿಲೆ ಇಲ್ಲದವರೆಲ್ಲಾ ಹೊರಗೆ ಬಂದುಬಿಡಿ" ಎಂದು ಎಲ್ಲರಿಗೂ ಕೇಳಿಸುವಂತೆ ಕೂಗು. ಕಾಯಿಲೆ ಮನುಷ್ಯರು ಮಾತ್ರ ಒಳಗಿರುವರು. ಉಳಿದವರು ಹೊರಗೆ ಬಂದುಬಿಡುತ್ತಾರೆ. ನಾವು ಆಗ ಸುಲಭವಾಗಿ ರೋಗಿಗಳನ್ನು ನೋಡಿ, ಆ ತರುವಾಯ ಮಹಾರಾಜರು ನಿನ್ನ ಸಂಬಳದ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬರುವರು' ಎಂದ.

ಮಂತ್ರಿಯ ಸಲಹೆಗೆ ರಾಮಯ್ಯನು ಒಪ್ಪಿ 'ಕಾಯಿಲೆ ಇಲ್ಲದವರು ಹೊರಗೆ ಬಂದುಬಿಡಿ' ಎಂದು ಎಲ್ಲರಿಗೂ ಕೇಳುವಂತೆ ಕೂಗಿದ.

ಈ ಮಾತುಗಳು ಕೇಳಿದ ಕೂಡಲೇ ಎಲ್ಲ ರೋಗಿಗಳೂ ಹೊರಗೆ ಬಂದುಬಿಟ್ಟರು. ಆಗ ಮಂತ್ರಿ ರಾಜನೊಂದಿಗೆ "ಮಹಾಸ್ವಾಮಿ, ನಾವೀಗ ರೋಗಿಗಳನ್ನು ನೋಡಿಕೊಂಡು ಬರೋಣ' ಎಂದ.

ರಾಜ ಮತ್ತು ಮಂತ್ರಿ ರಾಮಯ್ಯನೊಂದಿಗೆ ಹಾಲಿಗೆ ಹೋಗಿ ನೋಡಿದರೆ ಒಬ್ಬ ರೋಗಿಯೂ ಅಲ್ಲಿರಲಿಲ್ಲ. ಮಂಚಗಳೆಲ್ಲಾ ಖಾಲಿಯಾಗಿದ್ದವು.

ಇನ್ನೇನಿದೆ? ಮಂತ್ರಿಯ ತಂತ್ರ ಫಲಿಸಿತು. ರಾಮಯ್ಯ ವೈದ್ಯ ಪೆಚ್ಚಾಗಿ ಮೋರೆ ತಗ್ಗಿಸಿದ.






## 3

[ಕುಂಡಲಿನೀ ಸೈನ್ಯದೊಂದಿಗಿದ್ದ ಹಡಗುಗಳು ತುಫಾನಿಗೆ ಸಿಕ್ಕಿ, ಚಲ್ಲಾಪಿಲ್ಲಿಯಾದವು. ಸಮರಸೇನನು ಕೆಲವು ಸೈನಿಕರೊಂದಿಗೆ ಒಂದು ಭಯಂಕರವಾದ ದ್ವೀಪವನ್ನು ಸೇರಿಕೊಂಡನು. ಅಲ್ಲಿ ವಿಚಿತ್ರವಾದ ಜಂತುಗಳು ಹೋರಾಡುತ್ತಿರುವುದನ್ನು ನೋಡಿ ಹೆದರಿ ಮರವನ್ನೇರಿದರು. ಆ ತರುವಾಯ]

ಸಮರಸೇನನೂ, ಆತನ ಸೈನಿಕರೂ ಮರದ ಕೊಂಬೆಗಳಮೇಲೆ ಅವಿತಿಟ್ಟುಕೊಂಡು ಆ ವಿಚಿತ್ರ ಜಂತುಗಳ ಭಯಂಕರ ಹೋರಾಟವನ್ನು ನೋಡುತ್ತಿದ್ದರು. ಆ ಸಿಂಹಗಳ ನಡುವೆ ಸಿಕ್ಕಿಕೊಂಡ ಆನೆ ಅವುಗಳಿಂದ ತಪ್ಪಿಸಿಕೊಳ್ಳಲು ಅವಸ್ಥೆಪಡುತಿತ್ತು.

ಆಗ ಒಬ್ಬ ಸೈನಿಕನು ಧೈರ್ಯವಹಿಸಿ "ಸೇನಾಧಿಪತಿಗಳೇ, ಸಂದಿಗ್ಧದಲ್ಲಿ ಸಿಲುಕಿಕೊಂಡಿದ್ದೇವೆ. ಈ ಭೀಕರ ಅರಣ್ಯದಲ್ಲಿ ನಾವು ದೋಚಿಕೊಂಡು ಹೋಗಬಹುದಾದ ಧನರಾಶಿ ಏನಿರುತ್ತದೆ?" ಎಂದು ಸಮರಸೇನನನ್ನು ಕೇಳಿದ. ಮತ್ತೊಬ್ಬ ಸೈನಿಕನು ಆ ಮಾತನ್ನು ಮುಂದುವರೆಸಿ, "ಪ್ರಾಣದೊಂದಿಗೆ ಇಲ್ಲಿಂದ ಹೊರಬಿದ್ದರೆ ಅದೇ ನಮಗೆ ಮಹಾಭಾಗ್ಯ" ಎಂದ.

ಆಲೋಚನೆಯಲ್ಲಿ ಮುಳುಗಿದ ಸಮರಸೇನ. 'ಪ್ರಪಂಚದಲ್ಲೆಲ್ಲಾ ಪ್ರಜೆಗಳು ನಾಗರೀಕರಾಗಿ ಸುಖವಾಗಿ ಬಾಳುತ್ತಿರುವ ಈ ನವನಾಗರೀಕ ಕಾಲದಲ್ಲಿ, ಈ ದ್ವೀಪದ ನಿವಾಸಿಗಳು ಇನ್ನೂ ಶಿಲಾಯುಗದ ಕಾಲದಲ್ಲೇ ಇರುವಂತೆ ಕಾಣುತಿದೆ. ಇಲ್ಲಿ ಒಬ್ಬ ಅರಸನಾಗಲೀ, ಆಡಳಿತವಾಗಲೀ ಇದೆಯೇ ಇಲ್ಲವೇ? ಹೀಗಿರಲು ಧನ ಲಭಿಸುವುದೆಲ್ಲಿ ಬಂತು?' ಎಂದುಕೊಂಡ. ಹೀಗೆ ಸಮರಸೇನನು ಆಲೋಚಿಸುತ್ತಿರಲು



ಆ ಅರಣ್ಯವು ಪ್ರತಿಧ್ವನಿಸುವಂತೆ ಒಂದು ಕರ್ಕಶನಾದ ಕಂಠಸ್ವರ ಕೇಳಿಸಿತು.

" 'ಹೇಯ್', ಕಾಲಭುಜಂಗ, ಕಂಕಾಳ. ಇಲ್ಲಿ ಬನ್ನಿ. ಆ ಚತುರ್ನೇತ್ರನನ್ನು ಹುಡುಕಿ ಕೊಂದುಹಾಜೇಕು' ಎಂಬ ಪ್ರಳಯ ಭೀಕರ ನಾದ ಹತ್ತು ದಿಕ್ಕುಗಳಲ್ಲೂ ವ್ಯಾಪಿಸಿತು.

ಇದನ್ನು ಕೇಳಿ ಸಮರಸೇನನ ಹೃದಯ ಜಲ್ಲೆಂದಿತು. ಮರದ ಕೊಂಬೆಗಳಮೇಲೆ ಅವಿತಿಟ್ಟುಕೊಂಡಿದ್ದ ಆತನು ಗಡಗಡನೆ ನಡುಗಿದ.

ಆ ಭೀಕರ ಧ್ವನಿಯನ್ನು ಕೇಳಿದಕೂಡಲೇ ಕೆಳಗೆ ಕೊಳದ ಸಮೀಪದಲ್ಲಿದ್ದ ಜಂತುಗಳೂ, ಮರದಮೇಲಿದ್ದ ನರವಾನರರೂ ಚೆಲ್ಲಾಪಿಲ್ಲಿಯಾಗಿ ಓಡಿದವು.

ಅಷ್ಟರಲ್ಲಿ ಆ ಕೊಳದ ದಡದಲ್ಲಿ—

ತಾಳೆಮರದಷ್ಟು ಎತ್ತರದ ಒಬ್ಬ ಮನುಷ್ಯ ಕಾಣಿಸಿದ. ಆತನು ಒಕ್ಕಣ್ಣ. ಆತನ ಎರಡು ಕಾಲುಗಳಿಗೆ ಸುತ್ತಿಕೊಂಡು ಬುಸುಗುಟ್ಟುತ್ತಿರುವ ನಾಗಸರ್ಪ, ಆತನ ತಲೆಗೆ ಸ್ವಲ್ಪ ಮೇಲೆ ಆದರೆ ಹಿಂಬಾಗದಲ್ಲಿ ಮನುಷ್ಯನ ತಲೆಬುರುಡೆ! ಆ ತಾಳೆಮರದೆತ್ತರದ ಒಕ್ಕಣ್ಣನು ಕೊಳದ ದಡದಲ್ಲಿ ನಿಂತು ಸುತ್ತಲೂ ಪರಿಶೀಲಿಸಿ ನೋಡಿ,

"ಹೇ, ಮಾಯಾ ದ್ವೀಪ, ಎಕ್ಕದ ಗಿಡಗಳ ದಿಬ್ಬ, ಪಲ್ಲೇರು ಮಲೆ, ಮಲೆಯನ್ನು ಆತುಕೊಂಡ ಬಂಡೆ, ಆ ಬಂಡೆಯ ಮೇಲಿಂದ ನೋಡಿದರೆ ಏನು ಕಾಣಿಸುವುದೋ ಹೇಳು, ಕಂಕಾಳ" ಎಂದು ಹೂಂಕರಿಸಿದ. ಅದಕ್ಕೆ





ಉತ್ತರವಾಗಿ ಆ ತಲೆಬುರುಡೆ ವಿಕಾರವಾಗಿ ನಗುತ್ತಾ "ನಟ್ಟನಡುವೆ ಸಮುದ್ರದಲ್ಲಿ ನಾಟ್ಯವಾಡುತ್ತಿರುವ ನಾವೆ. ನಾವೆಯಲ್ಲಿ ಧನರಾಶಿ. ನಾವೆಯ ಹೊರಗೆ ಪಹರೆ ಕಾಯುವ ಒಬ್ಬ ನಾಗಕನ್ಯೆ. ನಾಗಕನ್ಯೆಯನ್ನು ಕೊಂದುಬಿಟ್ಟರೆ ನಾವೆ ತುಂಬಾ ಇರುವ ಧನರಾಶಿ ಎಲ್ಲಾ ನಮ್ಮದೇ!" ಎಂದು ಹೇಳಿತು.

"ಹೌದು ಆದನ್ನು ಸಾಧಿಸಿದರೆ ಹಣವೆಲ್ಲಾ ನಮ್ಮದೇ. ಆದರೆ ನೋಡು ಆ ಚತುರ್ನೇತ್ರನು... ಹೇ!" ಎಂದು ಮತ್ತೆ ಹೂಂಕರಿಸಿದ ಒಕ್ಕಣ್ಣ.

ಮರದಮೇಲೆ ಕುಳಿತು ಈ ಸಂಭಾಷಣೆ ಕೇಳುತ್ತಿದ್ದ ಸಮರಸೇನನಿಗೆ ಒಂದು ಕಡೆ ಭಯ, ಮತ್ತೊಂದು ಕಡೆ ಆಶ್ಚರ್ಯ ಒಂದೇ ಸಾರಿ ಆಯಿತು. ಈಗ ತಾನಿರುವುದು ಮಂತ್ರಗಳ ದ್ವೀಪವೆಂತಲೂ, ಆ ದ್ವೀಪದಲ್ಲಿರುವ ಒಂದಾನೊಂದು ಮಲೆಗೆ ಆತುಕೊಂಡಿರುವ ಬಂಡೆಯಮೇಲಿಂದ ನೋಡಿದರೆ ಸಮುದ್ರದಲ್ಲಿ ಧನರಾಶಿಯಿಂದ ತುಂಬಿರುವ ನಾವೆಯೊಂದು ಗೋಚರಿಸುವುದೆಂದೂ ಆತನು ಗ್ರಹಿಸಿಕೊಂಡ.

'ಆದರೆ ಚತುರ್ನೇತ್ರನು ಯಾರು? ಭೀಕರಾಕೃತಿಯ ಒಕ್ಕಣ್ಣ ಮಂತ್ರವಾದಿಗೂ ಆತನಿಗೂ ನಡುವೆ ಹಗೆತನ ಉಂಟಾಗಲು ಕಾರಣವೇನಿರಬಹುದು? ಈ ವೈರಕ್ಕೆ ನಾವೆಯಲ್ಲಿರುವ ಧನರಾಶಿ ಕಾರಣವಾಗಿರಬಹುದೇ'




ಎಂದು ಸಮರಸೇನನು ಯೋಚಿಸುತ್ತಿರಲು, ಭಯಂಕರಾಕಾರನಾದ ಆ ಮಂತ್ರವಾದಿ ಕೊಳದದಡದಿಂದ ಇಳಿದು ಅಡವಿಯೊಳಕ್ಕೆ ಹೊರಟುಹೋದ. ಆತನೊಂದಿಗೆ ಕಾಲಸರ್ಪವೂ, ಆ ತಲೆಬುರುಡೆಯೂ ಹೋದುವು.

ಇದುವರೆವಿಗೂ ಗಡಗಡ ನಡುಗುತ್ತಿದ್ದ ಸೈನಿಕರು ಆ ಏಕಾಕ್ಷಿ ಹೋದಕೂಡಲೇ ತುಸ ಚೇತರಿಸಿಕೊಂಡರು. ಎಲ್ಲರೂ ಸಮರಸೇನನ ಕಡೆ ನೋಡಿದರು. ಅವರೆಲ್ಲರ ಮುಖದಮೇಲೆ ಭೀತಿಹೊಂದಿದ ಚಿಹ್ನೆಗಳು ಕಾಣಿಸಿದವು. ಸೈನಿಕರಲ್ಲಿ ಒಬ್ಬನು ತಡಬಡಿಸುತ್ತಾ "ಈ ಏಕಾಕ್ಷಿ ಒಬ್ಬ ಮಂತ್ರವಾದಿಯಂತೆ ತೋರುವನು. ಅವನನ್ನು ಹಿಂಬಾಲಿಸುವ ಕಾಳಸರ್ಪ, ಮನುಷ್ಯನ ತಲೆಬುಡೆ ಎಷ್ಟೇ ಧೈರ್ಯವಂತ




ನನ್ನೂ ಭಯಗೊಳಿಸುವುದು. ಇಂತಹ ದ್ವೀಪ ವನ್ನು ಎಷ್ಟು ಬೇಗ ಬಿಟ್ಟು ತೆರಳಿದರೆ ಅಷ್ಟೂ ಉತ್ತಮ" ಎಂದ.

ಇದಕ್ಕೆ ಸಮರಸೇನನು ಯಾವ ಸಮಾಧಾನ ಕೊಡುವನೋ ಎಂದು ಸೈನಿಕರೆಲ್ಲಾ ಕಿವಿ ನಿಮಿರಿಸಿ, ನಿಶಬ್ದವಾಗಿ ಕುಳಿತಿದ್ದರು. ಆದರೆ ಸಮರಸೇನನು ತುಸ ಹೊತ್ತು ಸುಮ್ಮನಿದ್ದು "ಇಂತಹ ಭಯಂಕರ ದ್ವೀಪದಲ್ಲೂ ನಮಗೆ ಹಣ ಸಿಕ್ಕುವ ಅವಕಾಶ ಕಾಣಿಸುತ್ತಿದೆ. ಆದರೆ ಈಗ ಬೇಕಾದುದೆಲ್ಲಾ ಒಂದೇ ಒಂದು—ಕಷ್ಟಗಳನ್ನೆಲ್ಲಾ ಸಹಿಸುವ ಎದೆಗಾರಿಕೆ" ಎಂದ.

ಹೀಗೆ ಹೇಳುತ್ತಾ ಸಮರಸೇನನು ಮರದಿಂದ ಕೆಳಗೆ ಇಳಿದ. ಮಿಕ್ಕ ಸೈನಿಕರು ಒಬ್ಬರ ತರುವಾಯ ಒಬ್ಬರು ಕೆಳಗಿಳಿದರು. 'ಮುಂದಿನ ವಿಷಯವೇನು' ಎಂಬ ಪ್ರಶ್ನೆ ಪ್ರತಿಯೊಬ್ಬ ಸೈನಿಕನನ್ನೂ ಕಲವರಪಡಿಸಿತು. ನಿರ್ಣಯ ಮಾಡುವ ಹಕ್ಕು ಸಮರಸೇನನದೇ ಆದುದರಿಂದ ಎಲ್ಲರೂ ಆತನ ಕಡೆಯೇ ನೋಡುತ್ತಿದ್ದರು.

"...ಪಲ್ಲೇರು ಮಲೆ, ಮಲೆಯನ್ನು ಆತುಕೊಂಡ ಬಂಡೆ' ಎಂದು ಆ ಏಕಾಕ್ಷಿ ಮಾಂತ್ರಿಕನು ನುಡಿದ ಮಾತುಗಳನ್ನು ನೀವು ಕೇಳಿದಿರಷ್ಟೆ? ಆ ಮಲೆ, ಆ ಮಲೆಗೆ ಆತುಕೊಂಡಿರುವ ಬಂಡೆ ಎಲ್ಲಿದೆಯೋ ನಾವು ಕಂಡು ಹಿಡಿದರೆ ನಾವು ಬಂದ ಕಾರ್ಯ ಬಹುಮಟ್ಟಿಗೆ ನೆರವೇರಿದಂತಾಗುವುದು" ಎಂದ ಸಮರಸೇನ. ಆಗ ಸೈನಿಕರಲ್ಲೊಬ್ಬನು "ಆ ಮಾಂತ್ರಿಕ ಏಕಾಕ್ಷಿ ನುಡಿದುದರಲ್ಲಿ ಸತ್ಯವಿರುವುದೆಂದು ನಂಬುವಿರಾ?" ಎಂದ. ಅದಕ್ಕೆ ಸಮರಸೇನನು ಕೂಡಲೇ ಹೀಗೆಂದ:

"ಮಾಂತ್ರಿಕನು ಕೇಳಿದ ಪ್ರಶ್ನೆಯಲ್ಲೂ, ಅದಕ್ಕೆ ಉತ್ತರವಾಗಿ ಆ ತಲೆಬುರುಡೆ ಹೇಳಿದ ಮಾತುಗಳಲ್ಲೂ ಸುಳ್ಳು ಏನೂ ಇಲ್ಲ. ಅವರ ಸಂಭಾಷಣೆಯಿಂದ ಧನದಿಂದ ತುಂಬಿರುವ ನಾವೆಯನ್ನು ನಾಗಕನ್ಯೆ ರಕ್ಷಿಸುತ್ತಿರುವ ವಿಷಯವೂ ತಿಳಿದು ಬರುತ್ತಿದೆ. ಅಷ್ಟೇ ಅಲ್ಲದೆ ಚತುರ್ನೇತ್ರನೆಂಬ ಮತ್ತೊಬ್ಬ ಮಂತ್ರವಾದಿ ಅವರ ಶತ್ರುವೆಂತಲೂ ನಾವು ನಂಬಬಹುದು. ಆದರೆ ಇಷ್ಟೊಂದು ಪ್ರತಿಬಂಧಗಳನ್ನೂ ದಾಟಿಕೊಂಡು ಹೋದಲ್ಲಿ ಧನರಾಶಿ ತುಂಬಿರುವ ಆ

ನಾವೆಯನ್ನು ಹೇಗೆ ವಶಮಾಡಿಕೊಳ್ಳುವುದು ಎಂಬುದು ಜಟಿಲಸಮಸ್ಯೆಯಾಗಿದೆ."

ಈ ಸಮಸ್ಯೆಗೆ ಉತ್ತರಕೊಡಲು ಸೈನಿಕರಲ್ಲಿ ಯಾರೊಬ್ಬರಿಗೂ ಧೈರ್ಯವಿರಲಿಲ್ಲ. ಪ್ರಯಾಣಕ್ಕೆ ಹೊರಟಾಗ ಬೆದರಿದ ಸೈನಿಕರು ಈಗ ಸೇನಾಧಿಪತಿ ಹೇಳಿದ ಮಾತು ಕೇಳಿ ಮತ್ತಷ್ಟು ಭೀತಿಗೊಂಡರು.

ಸಮರಸೇನನು ತಾನು ನಿಂತಿದ್ದ ಸ್ಥಳದಿಂದ ಒಂದುಸಾರಿ ದೃಷ್ಟಿಬೀರಿದ. ಬಹಳ ಎಚ್ಚರಿಕೆಯಿಂದ ಮೆಲ್ಲನೆ ಹೆಜ್ಜೆಯಿಡುತ್ತಾ ಮುಂದಕ್ಕೆ ಹೊರಟ. ಆತನನ್ನು ಸೈನಿಕರು ಹಿಂಬಾಲಿಸಿಕೊಂಡು ಹೋದರು.

ಹಾಗೇ ವೃಕ್ಷಗಳನ್ನು ದಾಟಿಕೊಂಡು ಸ್ವಲ್ಪ ದೂರ ಹೋಗಲು, ಗೂಬೆಗಳು ಎದೆ ಬಿರಿಯುವಂತಹ ಶಬ್ದ ಮಾಡಿದವು.

ಇದೇನೆಂದು ಸಮರಸೇನನು ಯೋಚಿಸುತ್ತಿರುವಲ್ಲಿ ಬ್ರಹ್ಮಾಂಡವಾದ ಒಂದು ಅಚ್ಚಗಪ್ಪಿನ ಗೂಬೆ ಅವನ ತಲೆಯಮೇಲಿಂದ ಹಾರಿಹೋಯಿತು. ಅದು ಹಾರುತ್ತಾ ಮಾನವ ಭಾಷೆಯಲ್ಲಿ "ಚತುರ್ನೇತ್ರಾ, ಚತುರ್ನೇತ್ರಾ, ನರಮಾನವರು, ನರಾಧಮರು, ನರಮಾನವರು, ನರಾಧಮರು, ಬಹು ಪರಾಕ್" ಎಂದು ಪದೇ ಪದೇ ಎಚ್ಚರಿಕೆ ಕೊಡುತ್ತಾ ಹಾರುತ್ತಿದೆ. ಭೀಕರಾಕಾರದಲ್ಲಿದ್ದ ಗೂಬೆ ಮಾನವಸ್ವರದಲ್ಲಿ ಕೊಡುತ್ತಿರುವ ಎಚ್ಚರಿಕೆಯನ್ನು ಕೇಳಿ ಸಮರಸೇನನೂ ಮತ್ತು ಸೈನಿಕರೂ ಆಶ್ಚರ್ಯಚಕಿತರಾದರು.








ಪಕ್ಷಿಗಳಿಂದ ಮಾನವಭಾಷೆಯಲ್ಲಿ ಮಾತನಾಡಿಸಬಲ್ಲ ಆ ಮಹಾಮಾಂತ್ರಿಕನು ಯಾವ ಕಾರ್ಯವನ್ನ ತಾನೇ ಮಾಡಲಾರನು?' ಎಂದುಕೊಂಡರವರು.

ಇದಕ್ಕೆ ದಂಗಾದ ಸಮರಸೇನನನ್ನೂ, ಮತ್ತು ಸೈನಿಕರನ್ನೂ ದಿಗ್ಭ್ರಮೆಗೊಳಿಸುವಂತಹ ಮತ್ತೊಂದು ವಿಶೇಷ ದೃಶ್ಯ ಕಾಣಿಸಿತು. ಅದೊಂದು ವಾನರ. ಅಲ್ಲ ಅರ್ಧ ಭಾಗ ನರನ ಆಕೃತಿಯುಳ್ಳ ಒಂದು ನರವಾನರ. ಅದು ದೊಪ್ಪನೆ ಮರದಮೇಲಿಂದ ಇಳಿಯಿತು. ಇಷ್ಟರವರೆವಿಗೂ ಆಕಾಶದಲ್ಲಿ ಹಾರುತ್ತಾ ಎಲ್ಲರಿಗೂ ಎಚ್ಚರಿಕೆಕೊಡುತ್ತಿದ್ದ ಕರಿಯ ಗೂಬೆ, ಆ ನರವಾನರನ ಭುಜದ ಮೇಲೆ ವಾಲಿ ಅದರ ಕಿವಿಯಲ್ಲಿ ಏನೋ ರಹಸ್ಯವನ್ನು ಹೇಳಿತು. ಅದನ್ನು ಕೇಳಿದ ಕೂಡಲೇ ಆ ನರವಾನರ ಒಂದುಸಾರಿ ಹಿಂತಿರುಗಿ ನೋಡಿತು. ಸಮರಸೇನ ಮತ್ತು ಸೈನಿಕರು ಅದರ ಕಣ್ಣಿಗೆ ಬಿದ್ದರು. ಮರಕ್ಕೆ ಜೋಲಾಡುತ್ತಿರುವ ಬಳ್ಳಿಗಳ ಮುಖಾಂತರ ಒಂದು ಮರದಿಂದ ಮತ್ತೊಂದಕ್ಕೆ ನೆಗೆಯುತ್ತ ಅದು ಎತ್ತಲೋ ಅದೃಶ್ಯವಾಯಿತು.

"ಸೇನಾಧಿಪತಿಯೇ ನಾವು ಇನ್ನು ಹಿಂತಿರುಗುವುದು ಉತ್ತಮ. ಈ ಮಾಯಾದ್ವೀಪದಲ್ಲಿ ನಾವು ಸಾಧಿಸಬಹುದಾದ ಕಾರ್ಯವೇನಿಲ್ಲ. ಪಕ್ಷಿಗಳನ್ನೂ, ಜಂತುಗಳನ್ನೂ ಗೂಢಚಾರರನ್ನಾಗಿ ಉಪಯೋಗಿಸಿಕೊಳ್ಳುವ ಮಂತ್ರವಾದಿಗಳಮುಂದೆ ನಮ್ಮ ಕತ್ತಿ, ಬಾಣಗಳು ಕೆಲಸಕ್ಕೆ ಬಾರವು! ಸಾಕು, ಸಾಕು. ಹಿಂತಿರುಗೋಣ" ಎಂದು ಒಬ್ಬ ಸೈನಿಕನು ಸಮರಸೇನನನ್ನು ಕುರಿತು ಕೇಳಿಕೊಂಡ.

ಸಮರಸೇನನು ಕೇಳಿಯೂ ಕೇಳಿಸದವನಂತೆ ಸುಮ್ಮನಿದ್ದುಬಿಟ್ಟ. ಎದುರಾಗಿ ಮರದ ಮೇಲೆ ಆ ಗೂಬೆ, ಕೆಂಡದಂತೆ ಕೆಂಪಗಿದ್ದ ಕಣ್ಣುಗುಡ್ಡೆಗಳನ್ನು ಅತ್ತ ಇತ್ತ ತಿರುಗಿಸುತ್ತ ಎಲ್ಲವನ್ನೂ ನೋಡುತಿತ್ತು.

ಇದ್ದಕ್ಕಿದ್ದಂತೆ ಏನೋ ಹಠಾತ್ತಾಗಿ ಉಪಾಯ ಹೊಳೆದಂತೆ ಸಮರಸೇನನು ಪಕ್ಕದಲ್ಲಿದ್ದ ಸೈನಿಕನ ಹತ್ತಿರವಿದ್ದ ಬಿಲ್ಲುಬಾಣಗಳನ್ನು ತೆಗೆದುಕೊಂಡು, ಬಾಣವನ್ನು ದೃಢಭಾವದಿಂದ ಹೆದೆಗೇರಿಸಿದ.



ಕೂಡಲೇ ಒಬ್ಬ ಸೈನಿಕನು "ಸೇನಾನಿ, ಮಂತ್ರಶಕ್ತಿಯಿರುವ ಪಕ್ಷಿಯಮೇಲೆ ನಮ್ಮ ಬಾಣಗಳು ಕೆಲಸ ಮಾಡಲಾರವು. ಹಾಗೆ ಮಾಡಿದರೆ ಮಂತ್ರವಾದಿಗೆ ನಮ್ಮ ಮೇಲೆ ಕೋಪ ಬರಬಹುದು. ಆಲೋಚಿಸಿ" ಎಂದು ತನ್ನ ವ್ಯಕ್ತಿಗತ ಅಭಿಪ್ರಾಯವನ್ನು ಕೊಟ್ಟ.

ಸಮರಸೇನನು ಕಿರುನಗೆ ಬೀರುತ್ತಾ "ಅದನ್ನು ನೋಡಿಯೇಬಿಡೋಣ. ಇಷ್ಟು ದೂರ ಬಂದನಂತರ ಸುಮ್ಮನಿರುವುದೆಂದರೇನು? ನಮ್ಮ ಬಾಣದ ಸತ್ವವೆಷ್ಟಿದೆಯೋ ಪರಿಕ್ಷಿಸಿಯೇ ಬಿಡೋಣ" ಎಂದ.

ಹೀಗೆಂದು ಸಮರಸೇನನು ಬಾಣವನ್ನು ಮರದ ಮೇಲಿದ್ದ ಗೂಬೆಗೆ ಗುರಿಯಿಟ್ಟುಬಿಟ್ಟ. ಬಾಣ ರಿವ್ವನೆ ಹೋಗಿ ಆ ಗೂಬೆಗೆ ತಾಕಿತು. ಆದರೆ ಏಟು ತಿಂದು ವಿಲವಿಲನೆ ಒದ್ದಾಡಿ ಕೆಳಗೆ ಬೀಳುವುದೆಂದೆಣಿಸಿದ್ದ ಸಮರಸೇನನಿಗೆ ಆಶಾಭಂಗವಾಯಿತು.

ಕಿಕ್ಕಿಗೆ ಚುಚ್ಚಿಕೊಂಡಿದ್ದ ಬಾಣವನ್ನು ತನ್ನ ಕೊಕ್ಕಿನಿಂದ ಲೀಲಾಜಾಲವಾಗಿ ಕಿತ್ತು ಬಿಸಾಡಿ ಆ ಗೂಬೆ ಹೀಗೆ ಹೇಳಿತು: "ನರಾಧಮರು! ನೀವು ನನ್ನನ್ನು ಸಾಯಿಸಬಲ್ಲಿರಾ? ಹೂಂ, ಭಾರಿ ಮಂತ್ರವಾದಿ ಎಂದು ಗರ್ವಪಡುವ ಆ ಏಕಾಕ್ಷಿಗೇ ನಾನು ದುರ್ಲಭನಾಗಿರುವೆನು. ಹಾಗಿರುವಲ್ಲಿ ನೀವೆಷ್ಟು, ನಿಮ್ಮ ಬಾಣವೆಷ್ಟು? ಇರಿ, ಸ್ವಲ್ಪ ತಡೆಯಿರಿ. ನಮ್ಮ ಚತುರ್ನೇತ್ರನು ಬಂದು ನಿಮ್ಮ ರಕ್ತ ಕಣ್ಣಾರೆ ನೋಡುವ ಶುಭಸಮಯ ಹತ್ತಿರವಾಗು




ತ್ತಿದೆ." ಎಂದು ಮಾನವ ಭಾಷೆಯಲ್ಲಿ ತನ್ನ ಕೋಪವನ್ನು ಸೂಚಿಸಿತು.

ಈಗ ಆ ಗೂಬೆಯ ಮಾತಿನಿಂದ ತಾನೂ ತನ್ನ ಸೈನಿಕರೂ ಎಂತಹ ಪ್ರಮಾದಾವಸ್ಥೆಯಲ್ಲಿ ಸಿಲುಕಿಕೊಂಡಿರುವರೋ ಸಮರಸೇನನಿಗೆ ಅರಿವಾಯಿತು. ತತ್‌ಕ್ಷಣವೇ ಸೈನಿಕರಿಗೆ ಎಚ್ಚರಿಕೆ ಕೊಟ್ಟು, ಓಡಲು ಪ್ರಾರಂಭಿಸಿದ.

ಆದರೆ ಮರಗಳ ಮೇಲಿಂದ ಚಂಗನೆ ಹಾರುತ್ತಾ ಆ ಭಯಂಕರವಾದ ಕರಿಗೂಬೆ ಆತನನ್ನು ಬೆನ್ನಟ್ಟುತಿತ್ತು. ಹೇಗಾದರೂ ಮಾಡಿ ಸಮುದ್ರತೀರ ಸೇರಿ, ಹಡಗು ಹತ್ತಿ ಈ ಸಂಕಟದಿಂದ ಮುಕ್ತರಾಗೋಣವೆಂದು ಸಮರಸೇನನ ಕಾತುರತೆ. ಆ ಆತುರದಲ್ಲಿ ದಾರಿತಪ್ಪಿ ಒದ್ದಾಡಿಬಿಟ್ಟ. ಹಾಗೆ ಒಂದು





ಗಂಟೆಹೊತ್ತು ದಿಕ್ಕುದಾರಿ ತಿಳಿಯದೇ ಪಾಡು ಪಟ್ಟ. ತರುವಾಯ ತಾನು ದಾರಿತಪ್ಪಿಹೋದೆ ನೆಂದು ಸಮರಸೇನನಿಗೆ ತಿಳಿಯಿತು.

ಹಾಗೇ ಒಂದು ಕಡೆ ನಿಂತು, ನಿಧಾನವಾಗಿ ಯೋಚಿಸೋಣವೆಂದರೆ ಸಮಯ:ವಿಲ್ಲ, ಸಾಧ್ಯ ವಿಲ್ಲ. ಗೂಬೆ ಅವನನ್ನೂ, ಅವನ ಸೈನಿಕ ರನ್ನೂ ಅಟ್ಟಿಕೊಂಡು ಬರುತ್ತಿದೆ. ಇನ್ನೇನು ಮಾಡುವುದು?

ಏನು ಮಾಡಲೂ ತೋರದೆ ಸಮರಸೇನನು ಒಂದುಕಡೆ ಒಂದು ಮರವನ್ನು ಆತುಕೊಂಡು ನಿಂತುಬಿಟ್ಟ. ಅವನ ಅನುಚರರು ಅವನ ಸುತ್ತಲೂ ನೆರೆದರು.

"ನಾವು ದಾರಿ ತಪ್ಪಿದೆವು. ಅಷ್ಟೇ ಅಲ್ಲದೆ ಈ ದ್ವೀಪದಲ್ಲಿರುವ ಒಬ್ಬ ಮಂತ್ರವಾದಿಗೆ ವಿರೋಧಿಗಳಾದೆವು. ಈಗ ನಾವು ಮಾಡ ಬಹುದಾದುದೆಲ್ಲಾ ಒಂದೇ–ಕುಂಡಲಿನೀ ದೇವಿಯನ್ನು ಪ್ರಾರ್ಥಿಸುವುದೇ ನಮಗೆ ಉಳಿ ದಿರುವ ಮಾರ್ಗ. ಆ ದೇವಿಯೇ ನಮ್ಮನ್ನು ಕಾಪಾಡಬೇಕು" ಎಂದ ಸಮರಸೇನ.

"ಮೊದಲು ಆ ಗೂಬೆಯ ವಿಷಯ ನೋಡಿ. ಮೊದಲು ಅದರ ದೃಷ್ಟಿಯಿಂದ ತಪ್ಪಿಸಿಕೊಂಡರೆ ಸಾಕಾಗಿದೆ" ಎಂದ ಒಬ್ಬ ಸೈನಿಕ ಹೆದರಿ ನಡುಗುತ್ತಾ.

ಸರಿಯಾಗಿ ಅದೇ ಸಮಯಕ್ಕೆ ಮತ್ತೆ ಅರಣ್ಯವೆಲ್ಲಾ ಪ್ರತಿಧ್ವನಿಸುವಂತೆ ಒಂದು ಕಂಠಸ್ವರ ಕೇಳಿಸಿತು. ಆ ಸ್ವರ ಏಕಾಕ್ಷಿಯದು. "ಕಾಲಭುಜಂಗಾ! ಕಂಕಾಳ!!..."

ಆ ಕೂಗು ಕೇಳಿದೊಡನೆಯೇ ಚತುರ್ನೇತ್ರನ ಗೂಢಾಚಾರನಾದ ಗೂಬೆ ಮರದ ಮೇಲಿಂದ ಕಿರುಚುತ್ತಾ ಹಾರಿಹೋಯಿತು. 'ಗೂಬೆಯಪೀಡೆ ತೊಲಗಿತು, ಆದರ ಕಾಟ ದಿಂದ ಹೊರಬಿದ್ದೆವು ಎಂದು ಸಂತೋಷಪಡು ತ್ತಿದ್ದ ಸಮರಸೇನನನ್ನೂ ಆತನ ಸೈನಿಕರನ್ನೂ ಏಕಾಕ್ಷಿಯ ಕರ್ಕಶವಾದ ಕಂಠಸ್ವರ ಭಯ ಕಂಪಿತರನ್ನಾಗಿ ಮಾಡಿತು.

ಒಂದು ಕ್ಷಣವಾದರೂ ನಿಲ್ಲದೆ ಆ ಮರಗಳ ಮರೆಯಲ್ಲಿ ಅವರು ಕಾಲು ಒಯ್ದ ಕಡೆಗೆ ಓಡಲಾರಂಭಿಸಿದರು. (ಇನ್ನೂ ಇದೆ)






ಲಂಕಾದ್ವೀಪವನ್ನು ಪಾಲಿಸುತ್ತಿದ್ದ ರಾವಣಾಸುರನು ಒಂದು ದಿನ ತನ್ನ ಪಟ್ಟಮಹಿಷಿ ಮಂಡೋದರಿಯೊಂದಿಗೆ ತಾತನಾದ ಪುಲಸ್ತ್ಯರನ್ನು ನೋಡಲಿಕ್ಕಾಗಿ ಹೊರಟ.

ಮಗನೂ ಸೊಸೆಯೂ ಬರುವ ಹೊತ್ತಿನಲ್ಲಿ ಪುಲಸ್ತ್ಯರು ಪುರಾಣ ಪಠಣ ಮಾಡುತ್ತಿದ್ದರು. ಅದನ್ನು ನೋಡಿ ರಾವಣ "ಇದು ಎಂಥಾ ಪುರಾಣ ತಾತ?" ಎಂದು ಕೇಳಿದ.

"ಇದು ರಾಮಾಯಣ. ಇದನ್ನು ವಾಲ್ಮೀಕಿ ಎಂಬ ಮಹರ್ಷಿ ರಚಿಸಿದ. ವಿಚಿತ್ರವೇನೆಂದರೆ ಇದರಲ್ಲಿ ಹೇಳಿರುವ ಕಥೆಯೆಲ್ಲಾ ಮೊದಲು ನಡೆದುದಲ್ಲ, ಮುಂದೆ ನಡೆಯುವಂಥಾದ್ದು" ಎಂದರು ಪುಲಸ್ತ್ಯರು.

"ಆ ನಡೆಯುವ ಕಥೆ ಏನಂತ ಸ್ವಲ್ಪ ಚಿಟುಕಾಗಿ ಹೇಳಿ, ಕೇಳೋಣ" ಎಂದು ಕೋರಿಕೊಂಡ ರಾವಣ.

"ಶ್ರೀ ಮಹಾವಿಷ್ಣು ಭೂಮಿಯಲ್ಲಿ ದಶರಥನಿಗೆ ಮಗನಾಗಿ ಹುಟ್ಟಿ ಯುದ್ಧದಲ್ಲಿ ರಾವಣನೆಂಬುವನನ್ನು ಸಂಹಾರ ಮಾಡುತ್ತಾನಂತೆ; ಇದು ಮುಖ್ಯ ಕಥೆ" ಎಂದರು ಪುಲಸ್ತ್ಯರು. ಇದನ್ನು ಕೇಳುತ್ತಾ ಇದ್ದ ಮಂಡೋದರಿ ಹೆದರಿಬಿದ್ದು ತುಂಬಾ ತಳ್ಳಂಕದಿಂದ "ಆ ರಾವಣ ಎಂದರೆ ನೀವಲ್ಲ ತಾನೆ?" ಎಂದಳು ಗಂಡನೊಡನೆ.

ಅದಕ್ಕೆ ಪುಲಸ್ತ್ಯರು "ಲೋಕದಲ್ಲಿ ಇಬ್ಬರು ರಾವಣರಿಲ್ಲ! ರಾವಣನೆಂದರೆ ನಮ್ಮ ರಾವಣನೇ" ಎಂದರು.

ಇದನ್ನು ಕೇಳುತ್ತಲೇ ಮಂಡೋದರಿ ತನ್ನ ಪತಿಗೆ ಬರಲಿರುವ ಆಪತ್ತನ್ನು ನೆನೆದುಕೊಳ್ಳುತ್ತ ದುಃಖಿಸಲಾರಂಭಿಸಿದಳು.

ರಾವಣ ನಗುತ್ತ "ದಶರಥನೆಂದರೆ ಯಾರೋ ಮನುಷ್ಯನಾಗಿದ್ದಾನು. ಮನುಷ್ಯರನ್ನು ಚಕ್ಕುಲಿ ತಿಂದಹಾಗೆ ಕರಕರನೆ ನುಂಗುವ ರಾಕ್ಷಸಕುಲಕ್ಕೆಲ್ಲಾ ನಾನು ರಾಜ! ನನ್ನನ್ನೇ ಆ ದಶರಥನ ಮಗ ಕೊಲ್ಲುತ್ತಾನೆ? ಈ ಸುಳ್ಳುಪುರಾಣ ನಂಬಬೇಡ" ಎಂದ.

ಇದಕ್ಕೆ ಪುಲಸ್ತ್ಯರು—"ಹಾಗೆ ಅಲಕ್ಷ್ಯ ಮಾಡಿಬಿಡಬೇಡ. ಇದು ಸುಳ್ಳು ಪುರಾಣ

ಎ. ವಿ. ನಾಥ, ಮದರಾಸು



ಎಷ್ಟುಮಾತ್ರಕ್ಕೂ ಅಲ್ಲ; ಸತ್ಯವಿದು" ಎಂದರು." ಹಾಗಾದರೆ ನಾನೊಂದು ಕೆಲಸ ಮಾಡುತ್ತೇನೆ" ಎಂದ ರಾವಣ.

"ಏನದು?" ಎಂದಳು ಮಂಡೋದರಿ.

"ಆ ದಶರಥನೆಂಬವ ಈ ಸಮಯ ಎಲ್ಲಿಯೋ ಹುಟ್ಟಿದ್ದಾನು. ಅವನನ್ನು ಹಿಡಿದು ಕೊಂದುಬಿಟ್ಟರೆ, ಮತ್ತೆ ಅವನಿಗೆ ಮಗ ಹುಟ್ಟುವುದೂ, ಆ ಮಗ ನನ್ನನ್ನು ಕೊಲ್ಲುವುದೂ ಎಂಬ ಮಾತೇ ಇಲ್ಲ" ಎಂದ ರಾವಣ.

ಕೂಡಲೇ ರಾವಣ ಪತ್ನಿಯೊಂದಿಗೆ ಅಲ್ಲಿಂದ ಹೊರಟು ಲಂಕೆಗೆ ತಿರುಗಿ ಹೋದ. ಚಾರರನ್ನು ಕರೆದು "ದಶರಥನೆಂಬವನು ಯಾರೋ, ಅವನಿಗೆ ಮದುವೆಯಾಗಿದ್ದರೆ ಅವನ ಹೆಂಡತಿ ಯಾರೋ ಎಲ್ಲಾ ತಿಳಿದು ಬನ್ನಿ" ಎಂದು ಹೇಳಿ ಅವರನ್ನು ನಾಲ್ಕೂ ದಿಕ್ಕುಗಳಿಗೆ ಕಳಿಸಿದನು. ಸ್ವಲ್ಪ ಕಾಲವಾದಮೇಲೆ ಆ ಚಾರರು ತಿರುಗಿ ಬಂದು "ಪ್ರಭು, ಹೇಮ ಪಟ್ಟಣವನ್ನು ಹರಸೇನನೆಂಬ ರಾಜ ಪಾಲಿಸುತ್ತಾನೆ. ಅವನು ಕೋಸಲ ದೇಶದ ರಾಜನನ್ನೂ ಕೇಕಯ ದೇಶದ ರಾಜನನ್ನೂ ಸೋಲಿಸಿದನು. ಕೋಸಲ ದೇಶದ ರಾಜನಿಗೆ ಕೌಸಲ್ಯೆಯೆಂದೂ, ಕೇಕಯ ದೇಶದ ರಾಜನಿಗೆ ಕೈಕೇಯಿ ಎಂದೂ ಕುಮಾರಿಯರಿದ್ದಾರೆ. ಹರಸೇನನು ಆ ಬಾಲಿಕೆಯರನ್ನು ಹೇಮಪಟ್ಟಣಕ್ಕೆ ತಂದು ಪತ್ನಿಯ ಕೈಗೆ ಕೊಟ್ಟು "ಈ ಹುಡುಗಿಯನ್ನು ನಮ್ಮ ಸುಮಿತ್ರೆಯೊಂದಿಗೆ ಬೆಳೆಸು. ಈ ಮೂವರಿಗೂ ಒಳ್ಳೆಯ ಸಂಬಂಧವನ್ನು ನೋಡಿ ಮದುವೆ ಮಾಡುವ ಎಂದು ಹೇಳಿದ....".

ಆಗ ರಾವಣ "ನಾನು ದಶರಥನ ಸಂಗತಿ ತಿಳಿದುಕೊಂಡು ಬನ್ನೀ ಅಂದರೆ ನೀವು ಹೇಮ ಪಟ್ಟಣದ ಕಥೆ ಹೇಳುತ್ತೀರೇಕೆ?" ಎಂದು ಬೇಸರಿಸಿ ಕೇಳಿದ.

ಅದಕ್ಕೆ ಚಾರರು—"ಚಿತ್ತೈಸಬೇಕು ಪ್ರಭು. ಆ ಬಾಲಿಕೆಯರಲ್ಲಿ ದೊಡ್ಡವಳಾದ ಕೌಸಲ್ಯೆಗೆ ಮೊದಲು ವರನನ್ನು ನೋಡಿದರು. ಅವನೇ ದಶರಥ" ಎಂದರು.

"ಯಾವಾಗ ಮದುವೆ?" ಎಂದ ರಾವಣ.

"ಜೈಮಿನಿ ಎಂಬ ಮಹರ್ಷಿ ಬಂದು ಮದುವೆಗೆ ಮುಹೂರ್ತವಿಟ್ಟು ಹೋಗಿದ್ದಾರಂತೆ. ಇನ್ನೊಂದು ವಿಚಿತ್ರ ವಿಷಯಕೂಡ ಕೇಳಿದೆವು" ಎಂದರು.

“ಏನದು?” ಎಂದ ರಾವಣ ಆತುರದಿಂದ.

“ಸುಮಿತ್ರೆಗೂ, ಕೈಕೆಯಿಗೂ ಕೂಡ ಸಂಬಂಧ ಹುಡುಕುವಾಗ, ಆ ಹುಡುಗಿಯರು ‘ನಾವು ಮೂವರೂ ಒಟ್ಟಿಗೇ ಬೆಳೆದೆವು. ನಮ್ಮನ್ನು ಕೂಡಾ ಆ ದಶರಥನಿಗೇ ಕೊಟ್ಟು ಮದುವೆ ಮಾಡಿ. ನಾವು ಮೂವರೂ ಒಂದೇ ಕಡೆ ಇರುತ್ತೇವೆ’ ಎಂದರಂತೆ. ಆದ್ದರಿಂದ ಸುಮಿತ್ರೆ, ಕೈಕೇಯಿಯರನ್ನು ಕೂಡಾ ದಶರಥನಿಗೇ ಕೊಟ್ಟು ಮದುವೆ ಮಾಡುವರಂತೆ” ಎಂದು ಹೇಳಿ ಮುಗಿಸಿದರು.

“ಈ ಮದುವೆಯಾಗದಂತೆ ಮಾಡಬೇಕು” ಎಂದು ರಾವಣಾಸುರನು ಎದ್ದು, ಹೇಮಪುರಾಧೀಶನಾದ ಹರಸೇನನಮೇಲೆ ದೊಡ್ಡ ರೀತಿಯಾಗಿ ದಂಡೆತ್ತಿಕೊಂಡು ಹೊರಟ.

ರಾವಣನು ಆ ರಾಜನನ್ನು ಯುದ್ಧದಲ್ಲಿ ಸೋಲಿಸಿ, ವಿಜಯಗರ್ವದಿಂದ ಅಂತಃಪುರವನ್ನು ಹೊಕ್ಕು, ಆ ಮೂವರು ರಾಜಕುಮಾರಿಯರನ್ನೂ ಹಿಡಿದು ತನ್ನ ರಥದಮೇಲೆ ಕೂರಿಸಿಕೊಂಡನು.

ಇನ್ನು ಆ ದಶರಥನ ಕೆಲಸ ಮುಗಿಸಬೇಕೆಂಬ ಉದ್ದೇಶದಿಂದ, ತನ್ನ ರಥವನ್ನು ದಶರಥನ ಪಟ್ಟಣವಾದ ಅಯೋಧ್ಯೆಯ ಕಡೆಗೆ ಹೊರಡಿಸಿದ.

ದಾರಿಯಲ್ಲಿ ಗಂಗಾನದಿ ಅಡ್ಡ ಬಂತು. ಆ ನದಿಯ ಬದಿಯಲ್ಲಿ ಒಂದು ಸುಂದರವಾದ ನೌಕೆ ತೋರಿತು. ಅದನ್ನು ನೋಡಿ ರಾವಣಾಸುರ “ಯಾರದು ಈ ನೌಕೆ?” ಎಂದು



ಕೇಳಿದ. ಅದಕ್ಕೆ ಆ ದೋಣಿಯವರು “ಹರಸೇನ ಮಹಾರಾಜನದು. ಅವರ ಭಾವೀ ಜಾಮಾತ ದಶರಥನು ಮದುಮಗನಾಗಿ ಬರುವಾಗ ಅವನನ್ನು ನದೀ ದಾಟಿಸಲಿಕ್ಕಾಗಿ ಈ ನೌಕೆಯನ್ನು ರಾಜರು ಕಳಿಸಿದ್ದಾರೆ” ಎಂದರು.

ಇದನ್ನು ಕೇಳಿದಾಗ ರಾವಣನಿಗೆ ಒಂದು ಆಲೋಚನೆ ಹೊಳೆಯಿತು. ‘ಈ ಹುಲು ಮಾನವನನ್ನು ಕೊಲ್ಲಲಿಕ್ಕಾಗಿ ನಾನು ನನ್ನ ಕೆಲಸ ಬಿಟ್ಟು ಅಯೋಧ್ಯೆಯವರೆಗೆ ಹೋಗುವುದೇಕೆ? ಅವನ ಪ್ರಾಣ ತೆಗೆಯಲಿಕ್ಕೆ ನನ್ನ ಸೇವಕರೇ ಸಾಕು.’

ಹೀಗೆಂದುಕೊಂಡು ರಾವಣನು ಮಾಯಾವಿಗಳಾದ ಕೆಲವು ರಾಕ್ಷಸರನ್ನು ಕರೆದು— “ನೀವು ಈ ದೋಣಿಯವರೆಲ್ಲರನ್ನೂ ಕೊಂದು



ಭಕ್ಷಿಸಿರಿ. ನಂತರ ಈ ನಾವಿಕರ ರೂಪ ದಿಂದಿದ್ದು ಅವರಂತೆ ನಟಿಸುತ್ತಾ ದಶರಥ ನನ್ನು ದೋಣಿಯಲ್ಲಿ ಏರಿಸಿರಿ. ನದಿಯ ನಡು ವಿಗೆ ಒಯ್ದು ಬುಳುಕ್ಕನೆ ದೋಣಿಯನ್ನು ಮುಳುಗಿಸಿಬಿಡಿ!" ಎಂದು ಆಜ್ಞಾಪಿಸಿದನು.

ನಂತರ ರಾವಣ ರಾಜಕುಮಾರಿಗಳೊಂದಿಗೆ ಹಿಂತಿರುಗಿ ಲಂಕಾಪಟ್ಟಣವನ್ನು ಸೇರಿದ.

ಮಂಡೋದರಿ ಆ ಹುಡುಗಿಯರನ್ನು ನೋಡಿ "ಯಾರಿವರು?" ಎಂದು ಕೇಳಿದಳು. ರಾವಣನು ಸಂಗತಿಯೆಲ್ಲಾ ಹೇಳಿ "ದಶರಥ ನಿಗೆ ಜಲಗಂಡದ ಏರ್ಪಾಟು ಮಾಡಿ ಬಂದೆ. ಅವನಿಗೆ ಈಗೋ ನಾಳೆಯೋ ಗಂಗಾನದಿಯ ಮಧ್ಯೆ ದೊಡ್ಡ ಮದುವೆಯಾಗುತ್ತದೆ. ಅದೇ ಮುಹೂರ್ತದಲ್ಲಿ ಈ ಹುಡುಗಿಯರನ್ನು ನಾನು ಮದುವೆ ಮಾಡಿಕೊಳ್ಳುತ್ತೇನೆ!" ಎಂದ. ಕೇಳಿ ಮಂಡೋದರಿ ಹಣೇ ಬಾಯಿ ಹೊಡೆದು ಕೊಳ್ಳುತ್ತ—"ನಿಮಗೂ ನಿಮ್ಮ ಕುಲಕ್ಕೂ ಮಾರಕರಾದ ಮಕ್ಕಳನ್ನು ಪಡೆಯುವ ಈ ಹುಡುಗಿಯರನ್ನೇ ನೀವು ಮಾಡಿಕೊಳ್ಳು ವುದು? ಉರಿಯುವ ಕೊಳ್ಳಿಯಿಂದ ತಲೆ ತುರಿಸಿಕೊಳ್ಳುತ್ತಾರೆಯೇ?" ಎಂದಳು.

ರಾವಣ ಸ್ವಲ್ಪ ಆಲೋಚನೆ ಮಾಡಿ ಮಂಡೋದರಿ ಹೇಳಿದುದು ಸರಿ ಎಂದು ಕೊಂಡು ಈ ಮದುವೆಯ ಗೊಡವೆ ಬಿಟ್ಟ.

ಬಳಿಕ ದೊಡ್ಡದೊಂದು ಮರದ ಪೆಟ್ಟಿಗೆ ಯನ್ನು ತರಿಸಿ, ಆ ಮೂವರು ರಾಜಕುಮಾ ರಿಯರನ್ನು ಅದರೊಳಗಿಟ್ಟು ಮುಚ್ಚಿಸಿದ. ಇನ್ನು ಆ ಪೆಟ್ಟಿಗೆಯನ್ನು ಅಡಗಿಸುವುದೆಲ್ಲಿ? ಹೇಗೆ? ಎಂಬ ಸಮಸ್ಯೆ ಇದಿರಾಯಿತು.

ವಿಕರ್ಣನೆಂಬ ಮಾಯಾ ರಾಕ್ಷಸನೊಬ್ಬ ನಿದ್ದ. ಆಗ ಅವನ ನೆನಪು ಬಂತು. ವಿಕರ್ಣ ನೆಂದರೆ, ಹಿಂದೆ ವೇದಗಳನ್ನು ಎತ್ತಿಕೊಂಡು ಹೋಗಿ ಬ್ರಹ್ಮನನ್ನು ಪಾಡುಬಡಿಸಿದ ಸೋಮುಕಾಸುರನ ಮಗ. ಈ ಸೋಮುಕನನ್ನು ಕೊಲ್ಲಲಿಕ್ಕೇ ಮಹಾವಿಷ್ಣು ಮೊತ್ತಮೊದಲು ಮತ್ಸ್ಯಾವತಾರ ವೆತ್ತಿದ್ದು.

ರಾವಣ ಕರೆಯುತ್ತಲೇ ವಿಕರ್ಣ ಬಂದ. ರಾವಣ ಪೆಟ್ಟಿಗೆಯನ್ನು ಅವನಿಗೆ ತೋರಿಸಿ— "ಇದನ್ನು ಎತ್ತಿಕೊಂಡು ಹೋಗಿ ಭದ್ರವಾಗಿ ಅಡಗಿಸಿಡು. ನಾನು ಕೇಳಿದಾಗ ಮತ್ತೆ ತಂದು ಕೊಡುವಿಯಂತೆ" ಎಂದ.

"ಚಿತ್ತ ಪ್ರಭು" ಎಂದು ವಿಕರ್ಣ ಆ ಪೆಟ್ಟಿಗೆಯನ್ನು, ರಾವಣ ನೋಡುತ್ತಿರುವಾಗಲೇ, ತನ್ನ ಹೊಟ್ಟೆಯೊಳಗೇ ಅಡಗಿಸಿಟ್ಟ. "ಇನ್ನು ಇದರ ಗುಟ್ಟು ಯಾರಿಗೂ ತಿಳಿಯದು" ಎಂದು ಅಲಕ್ಷ್ಯವಾಗಿ ನಕ್ಕು ತನ್ನ ನಿವಾಸ ಸ್ಥಾನವಾದ ಸಮುದ್ರಕ್ಕೆ ಹೊರಟುಹೋದ ವಿಕರ್ಣ.

ಅತ್ತ ದಶರಥನು ಮದುಮಗನಾಗಿ ಹೊರಟು ಬರುತ್ತ, ಗಂಗೆಯಲ್ಲಿ ನೌಕೆಯೇರಿ, ರಾವಣನಾಜ್ಞೆಯಿಂದ ಮಾಯಾರಾಕ್ಷಸರು ಅವನನ್ನು ನೌಕೆಯೊಡನೆ ಗಂಗೆಯಲ್ಲಿ ಮುಳುಗಿಸಿಯೂ ಬಿಟ್ಟರು.

ಆದರೆ ಆಯುಷ್ಯವಿದ್ದವರು ನಡುಹೊಳೆಯಲ್ಲಿ ಬಿದ್ದರೂ ಸಾಯುವುದಿಲ್ಲ. ದಶರಥನು ಪ್ರವಾಹದಲ್ಲಿ ಹೊಡೆದುಕೊಂಡು ಸಮುದ್ರಕ್ಕೆ ಸೇರಿದ. ಅಲ್ಲಿ ತೆರೆಗಳು ಅವನನ್ನು ಆಚೀಚೆ ಹೊಡೆದು ಬದಿಗೆ ಹಾಕಿದುವು. ಆಗ ವಿಘ್ನೇಶ್ವರನ ಕಣ್ಣಿಗೆ ಅವ ಬಿದ್ದುಬಿಟ್ಟ.

ವಿಘ್ನೇಶ್ವರನು ಏನೋ ಕೆಲಸದ ನಿಮಿತ್ತ ವರುಣಲೋಕಕ್ಕೆ ಹೋಗಿ ಆ ದಾರಿಯಾಗಿ ಕೈಲಾಸಕ್ಕೆ ಹಿಂದಿರುಗುತ್ತಿದ್ದ. ಅವನು ಕೊನೆಯುಸಿರಿನಲ್ಲಿದ್ದ ದಶರಥನನ್ನು ಬದಿಗೆಳೆದು ಹೊಟ್ಟೆ ತುಳಿದು ನೀರೆಲ್ಲಾ ಕಾರಿಸಿದ. ನಂತರ ದಶರಥ ಎಚ್ಚರಕ್ಕೆ ಬಂದು, ತಾನು ಮದುಮಗನಾಗಿ ಹೊರಟು ಮೃತ್ಯುವಿನ ದವಡೆಗೆ ಬಿದ್ದ ಕಥೆಯೆಲ್ಲಾ ಹೇಳಿದ. ವಿಘ್ನೇಶ್ವರನು ಮೀನಮೇಷ ಲೆಕ್ಕಮಾಡಿ




"ಜೈಮಿನಿ ಋಷಿ ಇಟ್ಟ ಮುಹೂರ್ತವು ಇನ್ನರ್ಧಗಳಿಗೆಯಲ್ಲಿಯೇ ಬರುತ್ತೆ. ಆ ಮುಹೂರ್ತಕ್ಕೆ ತಪ್ಪದೆ ನಿನ್ನ ಮದುವೆ ಖಂಡಿತ ಆಗಿತೀರುತ್ತದೆ" ಎಂದ.

ಅವನು ಹಾಗೆ ಹೇಳುತ್ತಿರುವಾಗಲೇ ಅಲ್ಲಿಯೊಂದು ಪೆಟ್ಟಿಗೆ ತೇಲಿಕೊಂಡು ಬಂತು. ಅದನ್ನು ತೆರೆದು ನೋಡಿದಾಗ ದಶರಥನ ವಧುಗಳಾದ ಆ ಮೂವರು ರಾಜಕುಮಾರಿಯರೂ ಅದರೊಳಗಿದ್ದರು. 'ನೋಡಿದಿಯಾ ನನ್ನ ಜೋಸ್ಯ ಹೇಗೆ ನಿಜವಾಯಿತೋ' ಎನ್ನುತ್ತ ವಿಘ್ನೇಶ್ವರನು ಆ ಮುಹೂರ್ತಕ್ಕೇ ದಶರಥನ ವಿವಾಹವನ್ನು ಆ ಮೂವರು ರಾಜಕುಮಾರಿಯರೊಡನೆ, ವೇದೋಕ್ತಕ್ರಮದಂತೆಯೇ ಜರುಗಿಸಿಬಿಟ್ಟನು.

ತರುವಾಯ ವಾಯುದೇವನನ್ನು ಕರೆಸಿ, ಅವನ ಸಹಾಯದಿಂದ ಆ ವಧೂವರರನ್ನು ಅಯೋಧ್ಯೆಗೆ ಸೇರಿಸಿ, ತಾನು ಕೈಲಾಸವನ್ನು ಸೇರಿಕೊಂಡನು.

ಸಮುದ್ರ ತೀರದಲ್ಲಿ ಜರುಗಿದ ಈ ವಿವಾಹ ವನ್ನು ಎರಡು ತಿಮಿಂಗಿಲಗಳು ನೋಡಿದುವು. ಗಂಡು ತಿಮಿಂಗಿಲವು ಹೆಣ್ಣು ತಿಮಿಂಗಿಲ ದೊಂದಿಗೆ "ರಾವಣ ಎಷ್ಟು ಪ್ರಯತ್ನ ಮಾಡಿ ದರೂ ಈ ಮದುವೆಯನ್ನು ನಿಲ್ಲಿಸಲಾಗಲಿಲ್ಲ ನೋಡಿದಿಯಾ? ಬ್ರಹ್ಮಲಿಖಿತ ತಪ್ಪಿಸಲು ಸಾಧ್ಯವಿಲ್ಲ ಎಂಬ ಮಾತು ಎಷ್ಟು ನಿಜವೊ!" ಎಂದಿತು.

"ಈ ಪೆಟ್ಟಿಗೆ ಹೇಗೆ ಬಂತೋ ತಿಳಿಯ ಲಿಲ್ಲ" ಎಂದಿತು ಹೆಣ್ಣು ತಿಮಿಂಗಿಲ.

"ಅದು ವಿಕರ್ಣನ ಹೊಟ್ಟೆಯಿಂದ ಬಂತು. ಅವನು ಅದು ಯಾರಿಗೂ ಕಾಣದಂತೆ ತನ್ನ ಹೊಟ್ಟೆಯೊಳಗಿಟ್ಟುಕೊಂಡ. ಆಗಿನಿಂದ ಅವನಿಗೆ ದಾರುಣವಾದ ಉದರಶೂಲಿ ಪ್ರಾಪ್ತ ವಾಯಿತು. ಒಮ್ಮೆ ಪೆಟ್ಟಿಗೆ ಯನ್ನು ತೆಗೆದು ಹೊರಗೆ ಹಾಕದೆ ಸಾಧ್ಯವಿಲ್ಲ ವೆನಿಸಿತು. ಹೊರಗೆ ತೆಗೆದ ಕೂಡಲೇ ಅವನಿಗೆ ಹಾಯಿಯೆ ನಿಸಿ ನಿದ್ದೆಬಂತು. ಅವನು ಇನ್ನೂ ನಿದ್ದೆಯಲ್ಲೇ ಇದ್ದಾನೆ. ಈ ಪೆಟ್ಟಿಗೆ ಹೀಗೆ ತೇಲಿ ಬಂತು" ಎಂದಿತು ಗಂಡು ತಿಮಿಂಗಿಲ.

"ಅಯ್ಯೋ ಪಾಪ, ರಾವಣನಿಗೆ ಈ ಸಂಗತಿ ತಿಳಿದರೆ ವಿಕರ್ಣನನ್ನು ಕೊಂದುಹಾಕಿಯಾ ನಲ್ಲವೆ?" ಎಂದು ಕೇಳಿತು ಹೆಣ್ಣು ತಿಮಿಂಗಿಲ.

"ವಿಕರ್ಣ ಹಾಗೇ ಸತ್ತರೆ ನಮ್ಮ ಪೀಡೆ ತೊಲಗಿತು. ಆದರೆ ರಾವಣನಿಗೆ ಈ ಸಂಗತಿ ಗೊತ್ತೆ ಇಲ್ಲ. ಆ ಕುಮಾರಿಗಳು ವಿಕರ್ಣನ ಹೊಟ್ಟೆಯಲ್ಲೇ ಇರುವರೆಂದು ಈ ಗೊಡವೆ ಯನ್ನೇ ಮರೆತುಬಿಡುತ್ತಾನೆ. ಈ ರಾಜ ಕುಮಾರಿಯರಲ್ಲಿ ಹಿರಿಯಳಾದ ಕೌಸಲ್ಯೆಯ ಹೊಟ್ಟೆಯಲ್ಲಿಯೇ, ಆ ರಾವಣನನ್ನು ಕೊಲ್ಲಲು ಮಹಾವಿಷ್ಣು ರಾಮನಾಗಿ ಅವತರಿಸುತ್ತಾನೆ" ಎಂದಿತು ಗಂಡು ತಿಮಿಂಗಿಲ.

ಆ ಪ್ರಕಾರವೇ ಶ್ರೀರಾಮಚಂದ್ರನು ಚೈತ್ರ ಶುದ್ಧ ನವಮಿಯಂದು ಭೂಮಿಯಲ್ಲಿ ಅವತ ರಿಸಿ, ಮುಂದೆ ಲೋಕಕಂಟಕನಾದ ರಾವಣ ನನ್ನು ಸಂಹಾರ ಮಾಡಿದನು.



# ಮು ಖ ಚಿ ತ್ರ

**ಪಂ**ಚಪಾಂಡವರು ದ್ರೌಪದಿಯೊಂದಿಗೆ ಸ್ವಲ್ಪಕಾಲ ಹಸ್ತಿನಾವತಿಯಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಆಗಲೂ ಪಾಂಡವರ ಮೇಲೆ ಹಗೆತೊಟ್ಟಿದ್ದ ದುರ್ಯೋಧನನು ಧರ್ಮರಾಯನನ್ನು ಜೂಜಾಟಕ್ಕೆ ಕರೆದು, ಶಕುನಿಮೂಲಕ ಮಾಯದಾಟದಿಂದ ಅವನನ್ನು ಪೂರಾ ಸೋಲಿಸಿದನು.

ಆಗ ದ್ರೌಪದಿ ಗಾಂಧಾರಿಯೊಂದಿಗಿದ್ದಳು. 'ಪ್ರಾತಿಕಾಮಿ' ಎಂಬವನು ಅಲ್ಲಿಗೆ ಬಂದು "ದೇವಿ, ಧರ್ಮರಾಯನು ನಿಮ್ಮನ್ನು ಕೂಡಾ ಪಣವೊಡ್ಡಿ ಸೋತು ಹೋದರು. ನಮ್ಮ ಕೌರವೇಂದ್ರರು ನಿಮ್ಮನ್ನು ಕರೆಯುತ್ತಾರೆ ಬನ್ನಿ" ಎಂದ.

ದ್ರೌಪದಿ ಆಶ್ಚರ್ಯಪಟ್ಟು "ಧರ್ಮರಾಯರು ತಾವು ಸೋತಮೇಲೆ ನನ್ನನ್ನು ಸೋತರೆ? ಮೊದಲೇ ನನ್ನನ್ನು ಸೋತರೆ?" ಎಂದು ಕೇಳಿದಳು.

ಅದಕ್ಕೆ ಅವನು ಕೊಟ್ಟ ಉತ್ತರ ಅಸಮಂಜಸವಾಗಿತ್ತು. ಅವನು ಬಲಾತ್ಕಾರ ದಿಂದ ದ್ರೌಪದಿಯನ್ನು ಕುರುರಾಜಸಭೆಗೆ ಬರಮಾಡಿದ. ತುಂಬಿದ ಸಭೆಯಲ್ಲಿ ನಿಂತ ಅಸಹಾಯಕಳಾದ ದ್ರೌಪದಿಯನ್ನು ನೋಡಿ ದುರ್ಯೋಧನನು ನಕ್ಕು ದುಃಶಾಸನ ನಿಗೆ ಅನ್ಯಾಯ:ವಾಗಿ ದುರಾಜ್ಞೆ ಕೊಟ್ಟ.

ಅಷ್ಟು ದೊಡ್ಡ ಸಭೆಯಲ್ಲಿ ಎಲ್ಲರೂ ಪೆಚ್ಚಾಗಿ ನೋಡುತ್ತಿದ್ದರೇ ಹೊರತು ದ್ರೌಪದಿಗೆ ಸಹಾಯ ಮಾಡುವಂತಿರಲಿಲ್ಲ. ದುರ್ಯೋಧನನಾಜ್ಞೆಯಂತೆ ದುಃಶಾಸನನು ಅವಳ ಶೀರೆಯನ್ನು ಹಿಡಿದು ಎಳೆಯಲಾರಂಭಿಸಿದ. ಆದರೆ ಏನಾಶ್ಚರ್ಯ!

ದಿಕ್ಕಿಲ್ಲದ ದ್ರೌಪದಿ ಮನಸಾರೆ ಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತ ಅವನಿಗೇ ಶರಣು ಹೋಗಿಬಿಟ್ಟಿದ್ದಳು. ದುಃಶಾಸನನಿಂದ ಅವಳ ಶೀರೆಯನ್ನು ಎಳೆಯಲು ಸಾಧ್ಯವಾಗಲೇ ಇಲ್ಲ. ಎಳೆದಷ್ಟೂ ಶೀರೆ ಬೆಳೆಯುತ್ತಾ ಹೋಯಿತು. ಬಣ್ಣಬಣ್ಣದ ಶೀರೆಗಳ ರಾಶಿಯೇ ಆಯಿತು. ಕಟ್ಟಕಡೆಗೆ ಎಳೆದು ಎಳೆದು ಸೋತು ಸುಣ್ಣಾಗಿ ದುಃಶಾಸನನು ಮೂರ್ಛೆಹೋಗಿ ನೆಲಕ್ಕೆ ಬಿದ್ದ.

ನಂತರ ಜೂಜಿನ ಪಣದ ನಿಯಮದಂತೆ ಪಾಂಡವರು ದ್ರೌಪದಿಯೊಂದಿಗೆ ವನವಾಸಕ್ಕೆ ಹೊರಟರು. ಶ್ರೀ ಕೃಷ್ಣನಿಗೆ 'ದ್ರೌಪದೀ ಮಾನಸಂರಕ್ಷಕನೆ'ಂಬ ದಿವ್ಯ ಯಶಸ್ಸು ಪ್ರಾಪ್ತವಾಯಿತು.

ದುರ್ಯೋಧನನು ತನ್ನ ವಿನಾಶಕ್ಕೆ ತಾನೇ ಬಲವಾದ ಅಸ್ತಿಭಾರವನ್ನು ಹಾಕಿದ ಹಾಗಾಯಿತು ಈ ಅನ್ಯಾಯದ ಕೃತಿಯಿಂದ.




# ಬೀದಿಯಲ್ಲಿ ಕುಣಿತ



ಸೂರ್ಯಭಗವಾನನಿಗೆ ಇಬ್ಬರು ಕುವರರು. ಹಿರಿಯವನು ಯಮ, ಕಿರಿಯವನು ಶನಿ.

ಸೂರ್ಯನು ಪ್ರತಿದಿನ ಬೆಳಗ್ಗೆ ತನ್ನ ಏಳು ಅಶ್ವದ ರಥದಲ್ಲಿ ಲೋಕಸಂಚಾರ ಮಾಡಲು ಹೋಗುವ ಪದ್ಧತಿ. ಒಂದು ದಿನ ಯಮನು 'ಅಪ್ಪಾ, ನಾನೂಸಹ ನಿಮ್ಮೊಂದಿಗೆ ಬರುತ್ತೇನೆ. ಮನೆಯಲ್ಲಿ ಕುಳಿತಿದ್ದರೆ ಹೊತ್ತೇ ಹೋಗುವುದಿಲ್ಲ' ಎಂದ. 'ಆಗಲಿ' ಎಂದ ಸೂರ್ಯ.

ಆದರೆ ಯಮನು ಉಡುಪು ಹಾಕಿಕೊಂಡು ಬರುವುದು ಒಂದು ಕ್ಷಣ ಆಲಸ್ಯವಾಯಿತು. ಸೂರ್ಯನು ಯಾರಿಗಾಗಿಯೇ ಆಗಲಿ ನಿಲ್ಲಲು ಸಾಧ್ಯವಿಲ್ಲ. ಯಮನು ಹೊಸ್ತಿಲ ಹತ್ತಿರ ಬರುವವೇಳೆಗೆ ಸರಿಯಾಗಿ ಸೂರ್ಯನ ರಥ ಹೊರಟು ಹೋಯಿತು. ಆಗ ಯಮನು ತೀರಾ ಸಣ್ಣ ವಯಸ್ಸಿನವನಾದುದರಿಂದ ತಂದೆ ತನ್ನನ್ನು ಬಿಟ್ಟುಬಿಟ್ಟು ಹೋದುದಕ್ಕೆ ಮುಖಮುದುಡಿಕೊಂಡು ಒಂದು ಮೂಲೆಯಲ್ಲಿ ಕುಳಿತುಬಿಟ್ಟ. ಅವನಿಗಿಂತಲೂ ಕಿರಿಯವ ಶನಿ. ಅವನೇ ತುಂಬಾ ಕೀಟಲೆ ಸ್ವಭಾವದವನು. ಅಣ್ಣನನ್ನು ನೋಡಿ "ಏನಣ್ಣಾ, ಯಾಕೆ ಮುಖ ಹಾಗೆ ಮೂರು ಲೋಕಕ್ಕೆ ಹೋಗಿದೆ?" ಎಂದು ಕೇಳಿದ. ವಿಷಯವನ್ನೆಲ್ಲಾ ಹೇಳಿದ ಯಮ. ಆಗ ಶನಿ "ಅವರೊಂದಿಗೆ ಹೋದರೆ ಬಂದ ಲಾಭವೇನು? ನಿನಗೆ ಕಾಲಕಳೆಯಬೇಕೆಂದರೆ ನನ್ನೊಂದಿಗೆ ಬಾ. ಹೊಟ್ಟೆ ಹುಣ್ಣಾಗುವಂತೆ ನಗಿಸುವ ತಮಾಷೆ ತೋರಿಸುತ್ತೇನೆ" ಎಂದ. ಶನಿಯ ಹಿಂದೆ ಹೊರಟ ಯಮ.

ಅವರು ಹಾಗೆ ಹೋಗುತ್ತಾ ಭೂಲೋಕದಲ್ಲಿ ಒಂದು ಪಟ್ಟಣ ಪ್ರವೇಶಿಸಿದರು. ಆಗ ತಾನೇ ಬೆಳಗಾಗಿತ್ತಾದುದರಿಂದ ಬೀದಿಯಲ್ಲಿ ಜನ ಸಂಚಾರವಿರಲಿಲ್ಲ. ಶನಿ ಚಿನ್ನದಂತೆ ಮಿರುಗುಟ್ಟುವ ತನ್ನ ಜರತಾರಿ ಮೊಚ್ಚೆಗಳನ್ನು ಬೀದಿಯ ಮಧ್ಯೆ ಇಟ್ಟು ಯಮನೊಂದಿಗೆ ಒಂದು ಮರದ ಹಿಂದೆ ಹೋಗಿ ನಿಂತು "ಏನು ನಡೆಯುತ್ತದೋ ನೋಡುತ್ತಿರು" ಎಂದ. ಆ ನಗರದಲ್ಲಿ ಲಕ್ಷ್ಮಯ್ಯಶೆಟ್ಟಿ ಯೆಂಬ

ಪಿ. ಶಾಂತರಾಜು, ಬೆಂಗಳೂರು

ಲಕ್ಷಾಧಿಕಾರಿಯಿದ್ದ. ಆತನು ಮುಂಜಾನೆ ಎದ್ದು ಅಂಗಡಿಗೆ ಹೋಗುತ್ತಿರುವಾಗ ಮೊಚ್ಚೆಗಳನ್ನು ನೋಡಿದ. 'ಯಾರದೋ ಪಾಪ, ರಾತ್ರಿ ಗಾಡಿಯಲ್ಲಿ ಹೋಗುತ್ತಿರುವಾಗ ಜಾರಿ ಕೆಳಗೆ ಬಿದ್ದುಬಿಟ್ಟಿರಬಹುದು' ಎಂದುಕೊಂಡ. ತಾನು ಹಾಕಿಕೊಂಡಿದ್ದ ಹಳೇಚಪ್ಪಲಿಯನ್ನು ಬಿಟ್ಟು, ಆ ಮೊಚ್ಚೆಗಳು ಸರಿಹೋಗುವುದೇ ಎಂದು ಹಾಕಿಕೊಂಡು ನೋಡಿದ.

ವಿಚಿತ್ರವೇನೆಂದರೆ ಆ ಮೊಚ್ಚೆಗಳು ಅಳತೆ ಕೊಟ್ಟು ಅವನಿಗಾಗಿ ತಯಾರಿಸಿದ್ದೇನೋ ಎನ್ನುವಷ್ಟು ಮಟ್ಟಿಗೆ ಆತನ ಕಾಲಿಗೆ ಸರಿ ಹೋದುವು. ಒಂದುಸಾರಿ ಅತ್ತ ಇತ್ತ ತಿರುಗಿ ನೋಡಿ, ಯಾರೂ ಇಲ್ಲವೆಂದು ಭಾವಿಸಿ, ಠೀವಿಯಿಂದ ಒಂದು ಹೆಜ್ಜೆ ಮುಂದಿಟ್ಟ.

ಕಾಲು ನೆಲದಮೇಲೆ ಇಟ್ಟನೋ ಇಲ್ಲವೋ ಯಾರೋ ಒದ್ದಂತೆ ಆಗಿ, ಮೇಲಕ್ಕೆ ಹಾರಿದ.

ಜೋಡು ನೆಲಕ್ಕೆ ತಾಕಿದಷ್ಟೂ ಆತನು ಮೇಲಕ್ಕೆ ಎಗರುವುದು ಹೆಚ್ಚಾಗುತಿತ್ತು. ನೋಡುವವರಿಗೆ ಆತನು ನರ್ತನಮಾಡುತ್ತಿರುವಂತೆ ಕಾಣಿಸುತಿತ್ತು.

ಮೊದಲು ಶನಿ ಮತ್ತು ಯಮರ ಹೊರತು ಮತ್ಯಾರೂ ಇರಲಿಲ್ಲ. ಕ್ರಮೇಣ ಬೀದಿಯಲ್ಲಿ ಜನ ನೆರೆದರು. ಸ್ಥೂಲಕಾಯದ ಲಕ್ಷ್ಮಯ್ಯ ಶೆಟ್ಟಿ ಹೀಗೆ ನೆಗೆದಾಡುತ್ತಿರುವುದು ಅವರಿಗೆ ತಮಾಷೆಯಾಗಿ ತೋರಿತು. ಆ ರಸ್ತೆಗುಂಟ ಬಂದ ಶೆಟ್ಟಿಯು ನಾಪಿತ ಆತನ ಅವಸ್ಥೆ ನೋಡಿ, ಮರುಕಪಟ್ಟು, ಕುಡಿದು ಕುಣಿಯುತ್ತಿರುವ




ನೆಂದು ಭಾವಿಸಿದ. ಮೆಲ್ಲನೆ ಆತನನ್ನು ಮನೆಗೆ ಸೇರಿಸುವುದು ಯುಕ್ತವೆಂದು ಹತ್ತಿರಕ್ಕೆ ಹೋಗಿ ಶೆಟ್ಟಿಯ ಬಲಗೈ ಹಿಡಿದುಕೊಂಡ.

ಆತನು ಕೈ ಹಿಡಿದುಕೊಂಡನೋ ಇಲ್ಲವೋ ಶೆಟ್ಟಿಯ ಕೈ ಅವನ ಕೈಗೆ ಅಂಟಿಕೊಂಡಿತು. ಆತನೂ ಶೆಟ್ಟಿಯೊಂದಿಗೆ ನರ್ತಿಸಲು ಪ್ರಾರಂಭಿಸಿದ. ಅಕ್ಕಿ ತರುವೆನೆಂದು ಹೋದ ನಾಪಿತ ಎಷ್ಟು ಹೊತ್ತಿಗೂ ಮನೆಗೆ ಬಾರದಿರಲು ಅವನ ತಾಯಿ ಅವನನ್ನು ಹುಡುಕುತ್ತಾ ಅಲ್ಲಿಗೆ ಬಂದಳು. ಶೆಟ್ಟಿಯೊಂದಿಗೆ ಕುಣಿಯುತ್ತಿರುವ ಮಗನನ್ನು ಕಂಡು "ಇದೇನು ಕೇಡುಗಾಲ ಬಂತೋ ನಿನಗೆ" ಎಂದು ಅವನ ಕೈ ಹಿಡಿದು ಎಳೆಯಲು ಪ್ರಯತ್ನಿಸಿದಳು. ಆದರೆ ಪಾಪ, ಮಗನ ಕೈಹಿಡಿದ ಕೂಡಲೇ

ಆಕೆಯ ಕೈ ಸಹ ಅಂಟಿಕೊಂಡಿತು. ಆಕೆಯೂ ವಿಚಿತ್ರವಾಗಿ ಕುಣಿಯಲು ಪ್ರಾರಂಭಿಸಿದಳು.

ಬೀದಿಯಲ್ಲಿ ಜನ ಕೂಡಿರುವುದನ್ನು ಕಂಡು ರಕ್ಷಕ ಭಟನೊಬ್ಬನು ಬಂದು "ಏನಿದು ಗಲಾಟೆ? ನಡೆಯಿರಿ ಕೋರ್ಟಿಗೆ" ಎಂದು ಗದರಿಸುತ್ತಾ ಶೆಟ್ಟಿಯ ಎಡಗೈಯನ್ನು ಹಿಡಿದೆಳೆದ. ಅಷ್ಟೇತಡ,

ಕೂಡಲೇ ಅವನ ಕೈ ಶೆಟ್ಟಿಯ ಕೈಗೆ ಅಂಟಿಕೊಂಡುಹೋಗಿ ಅವನೂ ಸಹ ಮೇಳ ದಲ್ಲಿ ಸೇರಿ ಕುಣಿದು ಕುಪ್ಪಳಿಸ ತೊಡಗಿದ.

ಮತ್ತೊಂದು ನಿಮಿಷಕ್ಕೆಲ್ಲಾ ನಗರ ರಕ್ಷಕ ಭಟರ ಅಧಿಕಾರಿ ಬಂದು 'ಗಲಾಟೆ ತಪ್ಪಿಸುವ ಬದಲಾಗಿ, ಈ ಕುಣಿದಾಟದಲ್ಲಿ ನೀನೂ ಪಾಲುಗೊಂಡಿರುವೆಯಾ?' ಎಂದು ಕುಪಿತನಾಗಿ ಪೋಲಿಸಿನವನ ಕೈ ಹಿಡಿಯಲು, ಆತನೂ ಸಹ ಅವರೊಂದಿಗೆ ಕುಣಿಯಬೇಕಾಯಿತು. ಗದ್ದಲವೋಗದ್ದಲ.

ಮರದ ಹಿಂದೆ ನಿಂತು ನೋಡುತ್ತಿದ್ದ ಯಮನಿಗೆ ಇದು ಮೊದಮೊದಲು ತಮಾಷೆಯಾಗಿ ಕಂಡುಬಂದರೂ, ಆ ತರುವಾಯ ಡೊಳ್ಳು ಹೊಟ್ಟೆಯನ್ನಿಟ್ಟುಕೊಂಡು ಕುಣಿಯಲಾರದೆ ಅವಸ್ಥೆಪಡುತ್ತಿದ್ದ ಶೆಟ್ಟಿಯನ್ನೂ, ವೃದ್ಧಾಪ್ಯದಲ್ಲಿ ಕುಣಿಯಲಾರದೆ ಗೋಳಾಡುತ್ತಿದ್ದ ಆ ಅಜ್ಜಿಯನ್ನೂ ಕಂಡು ಬಹಳ ಮರುಕವುಂಟಾಯಿತು.

ಆಗಾತನು ಶನಿಯನ್ನು ಕುರಿತು "ಇನ್ನು ಇವರನ್ನು ಬಾಧೆಪಡಿಸಬೇಡ" ಎಂದ. ಶನಿ ತನ್ನ ಕೈಯನ್ನು ಒಂದುಸಾರಿ ಬೀಸಿದ ಕೂಡಲೇ ಕೈಗಳು ಅಂಟಿಕೊಂಡು ಕುಣಿಯುತ್ತಿದ್ದವರ ಕೈಗಳು ಸಡಿಲವಾಗಿ, ಅವರು ತಲಾ ಒಂದೊಂದು ಕಡೆ ಹೋಗಿ ಬಿದ್ದರು.

ಅಲ್ಲಿ ನೆರೆದಿದ್ದವರಲ್ಲಿ ಒಬ್ಬರು ಶೆಟ್ಟಿಯನ್ನು ವಿಷಯವೇನೆಂದು ಕೇಳಲು, ಆತನು "ಎಲ್ಲಾ ಈ ಹಾಳಾದ ಮೊಚ್ಚುಗಳ ಪ್ರಭಾವ" ಎಂದು, ಅದನ್ನು ಕಳಚಿಬಿಟ್ಟು, ವಿಷಯವನ್ನೆಲ್ಲಾ ತಿಳಿಸಿ ತನ್ನ ಹಳೇ ಚಪ್ಪಲಿಯನ್ನು ಕಾಲಿಗೆ ಹಾಕಿಕೊಂಡ.

ಎಲ್ಲರೂ ನೋಡುತ್ತಿರುವಂತೆಯೇ ಆ ಹೊಸ ಮೊಚ್ಚುಗಳು ರೆಕ್ಕೆ ಬಂದು ಪಕ್ಷಿಗಳಂತೆ ಆಕಾಶಕ್ಕೆ ಹಾರಿ ಮಾಯವಾದವು.






# ರಾಜಭಕ್ತಿ

ವಿದರ್ಭದೇಶವನ್ನು ಜಯಪಾಲನೆಂಬ ರಾಜನು ಆಳುತ್ತಿದ್ದ. ತನ್ನ ಪ್ರಜೆಗಳನ್ನು ಹೆತ್ತ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ. ಆತನ ಆಳ್ವಿಕೆಯಲ್ಲಿ ಎಲ್ಲರೂ ಸುಖವಾಗಿದ್ದರು.

ಒಂದು ದಿನ ಜಯಪಾಲನು ತನ್ನ ಮಿತ್ರ ಪರಿವಾರದೊಂದಿಗೆ ಬೇಟೆಯಾಡಲು ಅಡವಿಗೆ ಹೋದನು. ಅಡವಿಯಲ್ಲಿ ಒಂದುಭಾರಿ ಹುಲಿಯನ್ನು ಬೆನ್ನಟ್ಟಿಕೊಂಡು ಜಯಪಾಲನು ಬಹಳ ದೂರ ಹೋದ. ಆತನ ಪರಿವಾರ ಜಯಪಾಲನನ್ನು ಹಿಂಬಾಲಿಸಲಾರದಾಯಿತು.

ಕೊನೆಗೆ ಬೇಸರಗೊಂಡು ಜಯಪಾಲನು ಹುಲಿಗೆ ಗುರಿಯಿಟ್ಟು ಬಾಣಬಿಟ್ಟನು. ಗುರಿ ತಪ್ಪಿ, ಆ ಬಾಣ ಹುಲಿಯ ತೊಡೆಗೆ ತಗುಲಿತು. ಆ ಏಟಿನಿಂದ ತಪ್ಪಿಸಿಕೊಳ್ಳಲು ಹುಲಿಗೆ ಸಾಧ್ಯವಾಗಲಿಲ್ಲ.

ಜೀವದಿಂದ ಉಳಿಯಲು ಜಯಪಾಲನು ತನ್ನ ಮೇಲೆ ಮತ್ತೊಂದು ಬಾಣ ಬಿಡುವಷ್ಟರಲ್ಲಿ ಆತನಮೇಲೆ ಬಿದ್ದು ಕೊಲ್ಲಬೇಕು. ಪೆಟ್ಟು ತಿಂದ ಹುಲಿಗೆ ಬಾಧೆ ಒಂದು ಕಡೆ, ಬೇಟೆಗಾರನಮೇಲೆ ಸೇಡು ಒಂದು ಕಡೆ. ಆದುದರಿಂದ ಆತನನ್ನು ಕೊಲ್ಲಲು ಆ ಹುಲಿ ನಿರ್ಧರಿಸಿತು.

ಕೂಡಲೇ ಹುಲಿ ಎದುರು ತಿರುಗಿತು. ಬಾಣದಷ್ಟೇ ವೇಗದಿಂದ ಜಯಪಾಲನ ಮೇಲೆ ಬಿತ್ತು. ಆ ರಭಸಕ್ಕೆ ಜಯಪಾಲನ ಕುದುರೆ ಆಯತಪ್ಪಿ ಕೆಳಗೆ ಬಿದ್ದಿತು. ಜಯಪಾಲನು ಹತ್ತಿರದಲ್ಲಿದ್ದ ಒಂದು ಪೊದೆಯಲ್ಲಿ ಉರುಳಿದ. ತನಗೆ ಸಾವು ಖಂಡಿತವೆಂದುಕೊಂಡ ಜಯಪಾಲ.

ಇದೇ ಸಮಯದಲ್ಲಿ ಅನಿರೀಕ್ಷಿತವಾಗಿ ಒಬ್ಬ ಬ್ರಾಹ್ಮಣನು ಪಕ್ಕದಲ್ಲಿದ್ದ ಮರದ ಮೇಲಿಂದ ಕೆಳಕ್ಕೆ ಧುಮಿಕಿದ. ರೆಪ್ಪೆಬಡಿಯುವಷ್ಟರಲ್ಲಿ ಆತನು ಹುಲಿಯಮೇಲೆ ಬಿದ್ದು ತನ್ನ ಕೊಡಲಿಯಿಂದ ಅದರ ತಲೆ ಕಡಿದು

ಎನ್. ಸಾವಿತ್ರಿ, ರಾಮಪುರ



ಹಾಕಿದ. ಜಯಪಾಲನಿಗೆ ಇದೆಲ್ಲಾ ಒಂದು ಅದ್ಭುತವಾದ ಕನಸಿನಂತೆ ತೋರಿತು.

ಜಯಪಾಲನು ಸ್ವಲ್ಪ ಚೇತರಿಸಿಕೊಂಡ ತರುವಾಯ ಬ್ರಾಹ್ಮಣನಿಗೆ ತನ್ನ ಕೃತಜ್ಞತೆಯನ್ನು ಸೂಚಿಸಿದನು. ಆತನ ಧೈರ್ಯಸಾಹಸಗಳನ್ನು ಬಹುವಾಗಿ ಮೆಚ್ಚಿಕೊಂಡನು. ತನ್ನನ್ನು ಕಾಪಾಡಿದಾತನ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡನು.

ಆ ಬ್ರಾಹ್ಮಣ ಕಡುಬಡವ. ಹೆಂಡತಿ ಮತ್ತು ಇಬ್ಬರು ಮಕ್ಕಳನ್ನು ಪೋಷಿಸಲು ದಿನಾ ಕಾಡಿಗೆ ಹೋಗಿ ಸೌದೆ ಕಡಿದು ತಂದು ಅದನ್ನು ಮಾರಿ ಜೀವಿಸುತ್ತಿದ್ದ. ಆತನ ಹೆಸರು ರಾಮಶರ್ಮ. ಅವನ ವೃತ್ತಾಂತವನ್ನು ತಿಳಿದು ಜಯಪಾಲನಿಗೆ ರಾಮಶರ್ಮನಲ್ಲಿ ಒಳ್ಳೆಯ ಅಭಿಪ್ರಾಯವುಂಟಾಯಿತು. ಆತನನ್ನು ಸಕುಟುಂಬ ಸಮೇತನಾಗಿ ರಾಜಧಾನಿಗೆ ಬರುವಂತೆ ಆಹ್ವಾನಿಸಿದನು. ಮತ್ತು ಆತನನ್ನು ತನ್ನ ಅಂಗರಕ್ಷಕ ದಳಕ್ಕೆ ಮುಖ್ಯನನ್ನಾಗಿ ನೇಮಿಸಿದನು. ರಾಮಶರ್ಮನ ಬಡತನವು ತೊಲಗಿ ಸುಖದಿಂದ ಕಾಲ ಉರುಳುತಿತ್ತು. ಆತನ ಮಗ ಮತ್ತು ಮಗಳು ಬೆಳೆದು ದೊಡ್ಡವರಾಗುತ್ತಿದ್ದರು.

ಹೀಗೇ ಇರುತ್ತಿರಲು ಒಂದು ದಿನ ರಾತ್ರಿ ಜಯಪಾಲನು ರಾಮಶರ್ಮನಿಗೆ ಹೇಳಿ ಕಳುಹಿಸಿದನು. ಆತನು ಬಂದ ಕೂಡಲೇ ಉಪ್ಪರಿಗೆಯ ಮೇಲಕ್ಕೆ ಕರೆದೊಯ್ದು 'ಶರ್ಮಾ, ಕಿವಿಗೊಟ್ಟು ಕೇಳು....ನಿನಗೇನಾದರೂ ಧ್ವನಿ ಕೇಳಿಸುತ್ತಿದೆಯೇ?"

ಆ ಕತ್ತಲೆಯಲ್ಲಿ ಎಲ್ಲೆಲ್ಲೂ ನೀರವ. ಹೊರಗೆ ಏನೂ ಕಾಣುತ್ತಿರಲಿಲ್ಲ. ತುಂಬಾ ಗಮನ ಕೊಟ್ಟು ಹೊರತು ಏನೂ ಕೇಳಿಸುವಂತಿರಲಿಲ್ಲ.

ಸ್ವಲ್ಪಹೊತ್ತು ಆಲಿಸಿ ರಾಮಶರ್ಮನು ಜಯಪಾಲನೊಂದಿಗೆ "ಹೌದು, ಮಹಾಪ್ರಭೂ, ಉತ್ತರದಿಶೆಯಲ್ಲಿ ಯಾರೋ ಅಳುತ್ತಿರುವಂತಿದೆ, ಕಂಠಸ್ವರ ಹೆಂಗಸಿನದಂತಿದೆ" ಎಂದ ತಲೆತೂಗುತ್ತಾ.

"ಹೌದು. ಬಹುಶಃ ಬಹಳ ದೂರದಿಂದ ಆ ಸ್ವರ ಬರುತ್ತಿರಬಹುದು. ಆದುದರಿಂದಲೇ ಸ್ಪಷ್ಟವಾಗಿ ಕೇಳಿಸುತ್ತಿಲ್ಲ" ಎಂದ ಜಯಪಾಲ. ಅದಕ್ಕೆ ರಾಮಶರ್ಮ ಯೋಚಿಸುತ್ತಾ ಹೌದೆಂದು ತಲೆಯಾಡಿಸಿದ.

"ನನ್ನ ರಾಜ್ಯದಲ್ಲಿ ಯಾರಿಗೆ ಯಾವ ಆಪತ್ತು ಒದಗಿದರೂ ಕೂಡಲೇ ತಿಳಿದುಕೊಳ್ಳಬೇಕಾದ ಕರ್ತವ್ಯ ನನ್ನದು. ಆದುದರಿಂದ ಅದೇನು ವಿಷಯವೋ ತಿಳಿದುಕೊಂಡು ಬರುವೆಯಾ" ಎಂದು ಕೇಳಿದ ಜಯಪಾಲ.

ಕೂಡಲೇ ರಾಮುಶರ್ಮನು ಹೊರಟ. ಕಾರ್ಗತ್ತಲೆ. ಕಣ್ಣಲ್ಲಿ ಕಣ್ಣಿಟ್ಟು ನೋಡಿದರೂ ಸಹ ದಾರಿ ಕಾಣಿಸದು. ಶೀತಲಗಾಳಿ ರೊಯ್ಯನೆ ಬೀಸುತ್ತಿದೆ. ಕೈಯಲ್ಲಿ ಬಿಚ್ಚುಗತ್ತಿ ಹಿಡಿದು ಆಕ್ರಂದನ ಕೇಳಿಬರುತ್ತಿದ್ದ ಕಡೆಗೆ ರಾಮುಶರ್ಮ ನಡೆಯುತ್ತಿದ್ದ. ಅಲ್ಲಲ್ಲಿ ನಿಂತು ಧ್ವನಿಯನ್ನು ಹಿಡಿದು ತಾನು ಸರಿಯಾದ ಹಾದಿಯಲ್ಲಿ ಹೋಗುತ್ತಿರುವೆನೋ ಇಲ್ಲವೋ ನಿರ್ಣಯಿಸಿಕೊಳ್ಳುತ್ತ ಸಾಗಿದ.

ಜಯಪಾಲನು ಯೋಚನಾಮಗ್ನನಾದನು. ರಾಮುಶರ್ಮನೊಬ್ಬನೇ ಹೋಗಿ ಈ ವಿಷಯವನ್ನು ತಿಳಿದುಕೊಂಡು ಬರುವನೆ? ಇಲ್ಲ ಮನೆಗೆ ಹೋಗಿ ನಿದ್ದೆಮಾಡಿ, ಮಾರನೆಯದಿನ ಬಂದು ಯಾವುದಾದರೊಂದು ಡೊಂಗೀ ಬಿಡುವನೇ? ರಾಮುಶರ್ಮನ ಧೈರ್ಯಸಾಹಸಗಳಲ್ಲಿ ಜಯಪಾಲನಿಗೆ ನಂಬಿಕೆ ಇರಲಿಲ್ಲವೆಂದಲ್ಲ; ಒಂದು ವೇಳೆ ಮೈಗಳ್ಳತನವಿರಲೂ ಬಹುದು ಎಂದು ಸಂಶಯಪಟ್ಟನು.

ಯಾವುದಕ್ಕೂ ಒಳ್ಳೆಯದೆಂದು ಜಯಪಾಲನು ರಾಮುಶರ್ಮನಿಗೆ ಅರಿಯದಂತೆ ಆತನನ್ನು ಅನುಸರಿಸಲು ನಿಶ್ಚಯಿಸಿ, ಹೊರಟ. ರಾಮುಶರ್ಮನಿಗೆ ಯಾವುದಾದರೂ ಪ್ರಮಾದ




ಸಂಭವಿಸಿದರೆ ತಾನು ಸಹಾಯ ಮಾಡಬಹುದು. ತನ್ನ ಪ್ರಾಣವನ್ನು ಉಳಿಸಿದ ರಾಮುಶರ್ಮನಿಗೆ ಈ ರೀತಿ ಕೃತಜ್ಞತೆ ತೋರಿಸಬಹುದು, ಎಂದು ಆತನ ಎಣಿಕೆ.

ರಾಮುಶರ್ಮ ಉತ್ತರ ದಿಕ್ಕಿನಲ್ಲಿ ನಡೆಯುತ್ತಿದ್ದಾನೆ. ತಾನು ಸರಿಯಾದ ದಾರಿಯಲ್ಲೇ ನಡೆಯುತ್ತಿರುವೆನೆಂಬ ನಂಬಿಕೆ ಹೆಚ್ಚಾದಂತೆ, ಆತನು ವೇಗವಾಗಿ ನಡೆಯಲು ಪ್ರಾರಂಭಿಸಿದ.

ರಾಮುಶರ್ಮ ಊರಾಚೆಯಿದ್ದ ಸ್ಮಶಾನವನ್ನು ಪ್ರವೇಶಿಸಿದ. ಸ್ಮಶಾನದ ಮಧ್ಯದಲ್ಲಿ ಒಬ್ಬ ಸ್ತ್ರೀ ಅಳುತ್ತಿರುವುದನ್ನು ನೋಡಿದ.

"ಅಮ್ಮಾ ಏಕಳುತ್ತಿರುವೆ? ನೀವುಯಾರು? ನಿಮ್ಮ ವಿಷಯವನ್ನು ತಿಳಿದುಕೊಂಡು ಬರುವಂತೆ ಮಹಾರಾಜರು ನನ್ನನ್ನು ಇಲ್ಲಿಗೆ ಕಳು




ಹಿಸಿದ್ದಾರೆ." ಎಂದ ರಾಮಶರ್ಮ ವಿನಯ ದಿಂದ. ಅವಳು ಅಳುತ್ತಾ ಗದ್ಗದ ಸ್ವರದಿಂದ "ನಾನು ಯಾರಾದರೇನು? ನನ್ನ ಸಂಕಟ ತೀರಿಸಬಲ್ಲೆಯಾ ?" ಎಂದು ಕೇಳಿದಳು.

"ಮಹಾರಾಜರು ತಮ್ಮ ಪ್ರಜೆಗಳನ್ನು ಹೆತ್ತ ಮಕ್ಕಳಂತೆ ನೋಡಿಕೊಳ್ಳುತ್ತಿರುವರು. ಅವರಿಗೆ ನಿಮ್ಮ ಕಷ್ಟವನ್ನು ಪರಿಹರಿಸಲು ಸಾಧ್ಯವಾಗಬಹುದು" ಎಂದ ರಾಮಶರ್ಮ.

"ಸರಿ, ಹಾಗಾದರೆ ಕೇಳು. ನಾನು ಭೂದೇವಿ. ಇನ್ನೆಂಟು ದಿನಗಳಲ್ಲಿ ಮಹಾ ರಾಜನು ಸತ್ತುಹೋಗುತ್ತಾನೆ. ಇಷ್ಟು ದಿನ ದಿಂದ ನಮ್ಮನ್ನು ಅಕ್ಕರೆಯಿಂದ ಪಾಲಿಸಿದ ರಾಜನು ನಮ್ಮನ್ನು ಬಿಟ್ಟು ತೆರಳುವನಲ್ಲಾ ಎಂದು ನಾನು ಚಿಂತಿಸುತ್ತಿದ್ದೇನೆ" ಎಂದಳು.

ನಿಶ್ಚೇಷ್ಟಿತನಾದ ರಾಮಶರ್ಮ. ಸ್ವಲ್ಪ ಚೇತರಿಸಿಕೊಂಡ ತರುವಾಯ "ಮಹಾ ರಾಜರನ್ನು ಕಾಪಾಡುವ ಮಾರ್ಗವೇನಾದರೂ ಇದೆಯೇ?" ಎಂದು ಕೇಳಿದ.

"ಇಲ್ಲದೇನು? ಇದೆ. ಆದರೆ ಯಾರೂ ಅಂತಹ ಕಾರ್ಯವನ್ನೆಸಗಲು ಸಿದ್ಧರಾಗರು"

"ಹೇಳಿ. ನಾನು ಮಾಡಬಲ್ಲೆ" ಎಂದ ಶರ್ಮ ಖಡಿಂತ ಸ್ವರದಿಂದ.

"ಸ್ಮಶಾನದ ಆಚೆ ಮಹಾಕಾಳಿಯ ಆಲಯವಿದೆ. ಒಬ್ಬ ಬ್ರಹ್ಮಚಾರಿಯನ್ನು ಕಾಳಿಕಾದೇವಿಗೆ ಬಲಿಕೊಟ್ಟರೆ, ಆಕೆ ಸಂಪ್ರೀತಳಾಗಿ, ಮಹಾರಾಜನನ್ನು ಈ ಗಂಡಾಂತರದಿಂದ ಪಾರುಮಾಡುವಳು. ಆತನು ಪೂರ್ಣ ಆಯುಸ್ಸನ್ನು ಅನುಭ ವಿಸುವನು."

ರಾಮಶರ್ಮನು ಮನೆಕಡೆ ನಡೆದ. ನಡೆ ಯುತ್ತಾ ಅವನು ಹೀಗೆಂದು ಆಲೋಚಿಸಿದ: "ಊರಿನಲ್ಲಿ ಅನೇಕ ಬ್ರಹ್ಮಚಾರಿಗಳಿದ್ದಾರೆ. ಆದರೆ ಯಾವ ತಂದೆತಾಯಿಯಾಗಲೀ ತಮ್ಮ ಮಗನನ್ನು ಬಲಿ ಕೊಡಲು ಒಪ್ಪಲಾರರು. ಹೇಗೆ ಮತ್ತೆ?" ಹೀಗೇ ಆಲೋಚಿಸುತ್ತಿರಲು ರಾಮಶರ್ಮನಿಗೆ ತಟಕ್ಕನೆ ಒಂದು ಯೋಚನೆ ಹೊಳೆಯಿತು. ತನ್ನ ಮಗನೂ ಸಹ ಬ್ರಹ್ಮ ಚಾರಿ. ಇನ್ನೊಬ್ಬರನ್ನು ಆಶ್ರಯಿಸದೆ ತನ್ನ ಮಗನನ್ನೇ ಬಲಿಕೊಟ್ಟರೆ ರಾಜನು ದೀರ್ಘಾ ಯುವಾಗುವನು. ಈರೀತಿ ಜಯಪಾಲನನ್ನು ಈ ಗಂಡದಿಂದ ಕಾಪಾಡಬಹುದು.



ಆದರೆ ತನ್ನದೂ ಹೆತ್ತ ಕರಳು. ನೋಡಿ ನೋಡಿ ತನ್ನ ಮಗನನ್ನೇ ಕೈಯಾರೆ ಕೊಲ್ಲುವುದೆಂದರೆ ಹೃದಯ ಬಿರಿಯದೆ ತಪ್ಪದು. ಆದರೀಗ ಗತ್ಯಂತರವಿಲ್ಲ. ಮಗನು ಸತ್ತರೆ ತಾನೊಬ್ಬನೇ ಚಿಂತಿಸುವನು. ರಾಜನು ಸತ್ತುಹೋದರೆ, ರಾಜ್ಯವೆಲ್ಲಾ ತಲೆಕೆಳಗಾಗಿ ಅಲ್ಲಕಲ್ಲೋಲವಾಗುವುದು. ಆದುದರಿಂದ ಪ್ರಜಾಕ್ಷೇಮಕ್ಕಾಗಿ ಮಗನನ್ನು ಬಲಿಕೊಡಲು ರಾಮಶರ್ಮ ನಿಶ್ಚಯಿಸಿಕೊಂಡ.

ಹೀಗೆ ನಿರ್ಧಾರ ಮಾಡಿಕೊಂಡು ಆತನು ಬೇಗ ಬೇಗ ಮನೆಯ ಕಡೆ ನಡೆಯಲುಪಕ್ರಮಿಸಿದನು. ಮನೆಗೆ ಬಂದ ಕೂಡಲೇ ಮಗನನ್ನು ಎಬ್ಬಿಸಿ, ಅವನಿಗೆ ಸ್ನಾನಮಾಡಿಸಿ, ಶುಚಿಯಾಗಿ ತನ್ನೊಂದಿಗೆ ಬರುವಂತೆ ಹೇಳಿದ. ತಂದೆಯ ಮಾತಿಗೆ ಎಂದೂ ಎದುರಾಡದ ಮಗ, ಆತನು ಹೇಳಿದ ಪ್ರಕಾರವೇ ನಡೆದುಕೊಂಡ. ತಾನು ಮಾಡಲು ನಿರ್ಧರಿಸಿದ ಕಾರ್ಯವನ್ನು ತನ್ನ ಹೆಂಡತಿಗೂ ಹೇಳಲಿಲ್ಲ ರಾಮಶರ್ಮ.

ಮಗನನ್ನು ಕರೆದುಕೊಂಡು ಮಹಾಕಾಳಿ ಮಂದಿರಕ್ಕೆ ಹೋದ. ಗುಡಿಯಲ್ಲಿ ದೀಪಾರಾಧನೆ ಮಾಡಿದ ತರುವಾಯ ಮಗನೊಂದಿಗೆ ಎಲ್ಲ ವಿಷಯವನ್ನೂ ಹೇಳಿದ.

ಇದನ್ನು ಕೇಳಿ ಆ ಹುಡುಗನು ಉತ್ಸಾಹದಿಂದ "ಅಪ್ಪಾ, ಇಂತಹ ಅವಕಾಶ ಲಭಿಸುದುದು ನಮ್ಮ ಅದೃಷ್ಟ. ಇನ್ನೂ ಏಕೆ ಆಲೋಚಿಸುವಿರಿ? ಈಗಲೇ ನನ್ನನ್ನು ಮಹಾ




ಕಾಳಿಗೆ ಬಲಿಕೊಟ್ಟು ಮಹಾರಾಜರ ಪ್ರಾಣ ವುಳಿಸಿ" ಎಂದ ತಂದೆಗೆ ತಕ್ಕ ಆ ಮಗ.

ಆ ಹುಡುಗನು ಕಾಳಿಕಾದೇವಿಯ ಮುಂದೆ ತಲೆ ಬಾಗಿಸಿ ಕುಳಿತುಕೊಂಡ. ಅಚಲ ಧೈರ್ಯದಿಂದ ರಾಮಶರ್ಮನು ತನ್ನ ಮಗನ ತಲೆ ಕಡಿಯಲು ಖಡ್ಗವನ್ನು ಮೇಲೆ ಎತ್ತಿದ. ಇನ್ನೊಂದು ನಿಮಿಷದಲ್ಲಿ ತಲೆ ಕೆಳಗೆ ಉರುಳಬೇಕು, ಆಗ ಆತನ ಕೈಯನ್ನು ಯಾರೋ ಕದಲದಂತೆ ಹಿಡಿದುಕೊಂಡಂತೆ ಭಾಸವಾಯಿತು.

ಹಿಂತಿರುಗಿ ನೋಡಿದರೆ ಕಾಳಿಕಾದೇವಿ. ದೇದೀಪ್ಯಮಾನವಾಗಿ ಪ್ರಕಾಶಿಸುತ್ತಾ, ಪ್ರಜ್ವಲಿಸುತ್ತಿರುವ ನೇತ್ರಗಳಿಂದಿರುವ ಆ ಮಹಾತಾಯಿಯ ಮುಂದೆ ಸಾಷ್ಟಾಂಗ

ನಮುಸ್ಕಾರವನ್ನು ಮಾಡಿದರಾಮಶರ್ಮ. ಆಗ ದೇವಿ "ಶರ್ಮಾ, ನಿನ್ನ ಭಕ್ತಿಗೆ ಮೆಚ್ಚಿದೆ. ನಿನ್ನ ಮಗನನ್ನು ಬಲಿಕೊಡದೆಯೇ ನಿನ್ನ ಕೋರಿಕೆ ನೆರವೇರುವುದು" ಎಂದು ಹೇಳಿ ಅದೃಶ್ಯಳಾದಳು.

ರಾಮಶರ್ಮನು ಮಗನನ್ನು ಮನೆಗೆ ವಾಪಸು ಕರೆತಂದುಬಿಟ್ಟ. ತಾನು ಸಂತುಷ್ಟನಾಗಿ ರಾಜನ ಅರಮನೆಗೆ ಹೋದ.

ಈ ಸಂಘಟನೆಗಳನ್ನೆಲ್ಲಾ ನೋಡಿದ್ದ ಜಯಪಾಲನು ರಾಮಶರ್ಮನು ಬರುವಷ್ಟರಲ್ಲಿ ಆತನಿಗಾಗಿ ಕುತೂಹಲದಿಂದ ಎದುರು ನೋಡುತ್ತಿರುವಂತೆ ಮನೆಯಲ್ಲಿ ಕುಳಿತಿದ್ದ.

ರಾಮಶರ್ಮನು ಬಂದು "ಮಹಾಪ್ರಭೂ ಅದೇನಿಲ್ಲ. ತನ್ನ ಮಗನು ತೀರಿಕೊಂಡನೆಂದು ಬಡವಳೊಬ್ಬಳು ಶೋಕಿಸುತ್ತಿದ್ದಳು. ಸಮಾಧಾನಮಾಡಿ ಬಂದೆ" ಎಂದ.

ಜಯಪಾಲನಿಗೆ ನಿಜಾಂಶವು ತಿಳಿದಿದ್ದರೂ ಆತನು ಹೇಳಿದ ಮಾತುಗಳನ್ನು ಆಗ ನಂಬಿದಂತೆ ನಟಿಸಿದ. ನಂತರ ಮಾರನೆಯ ದಿನ ದೊಡ್ಡ ಸಭೆ ಸೇರಿಸಿದ. ಆ ಸಭೆಗೆ ಊರ ಪ್ರಮುಖರನ್ನೆಲ್ಲಾ ಬರಮಾಡಿದ. ಹೀಗೆ ತುಂಬಿದ ಆ ಮಹಾ ಸಭೆಯಲ್ಲಿ ಹಿಂದಿನ ರಾತ್ರಿ ನಡೆದ ಸಂಗತಿಯನ್ನೆಲ್ಲಾ ಹೇಳಿ, ಜಯಪಾಲನು "ರಾಮಶರ್ಮ ನನಗೆ ಮತ್ತೊಂದುಬಾರಿ ಪ್ರಾಣದಾನ ಮಾಡಿದನು. ಆದರೆ ತನ್ನ ಹಿರಿಮೆಯನ್ನು ಹೇಳಿಕೊಳ್ಳುವುದು ಆತನ ಗುಣವಲ್ಲ. ತನ್ನ ಪ್ರಭುವಿಗಾಗಿ ಎಂತಹ ತ್ಯಾಗವಾದರೂ ಹಿಂತೆಗೆಯದೇ ಮಾಡಲು ಸಿದ್ಧನಾದನು. ರಾಮಶರ್ಮನ ಋಣ ನಾನು ಹೇಗೆ ತೀರಿಸಲಿ? ನನಗೇನೂ ತಿಳಿಯದಾಗಿದೆ"

ಎಂದು ಹೇಳಿ, ರಾಮಶರ್ಮನಿಗೆ ಭಾರಿ ಸನ್ಮಾನ ಮಾಡಿದನು. ಆತನಿಗೆ ತನ್ನ ಆಸ್ಥಾನದಲ್ಲಿ ಒಂದು ಉನ್ನತಪದವಿಯನ್ನು ಕೊಟ್ಟು ಸತ್ಕರಿಸಿದನು.

ರಾಮಶರ್ಮನಿಗೆ ಲಭಿಸಿದ ಗೌರವಕ್ಕೆ ಎಲ್ಲರೂ ಹರ್ಷಚಿತ್ತರಾದರು. ರಾಮಶರ್ಮನು ತೋರಿಸಿದ ರಾಜಭಕ್ತಿ ಮೂಲೆ ಮೂಲೆಯಲ್ಲೂ ಹರಡಿತು.






# ಹನುಮನ ಬಾಲ

(ರಾಮಾಜ್ಞೆಯನ್ನು ತಲೆಯೊಳಾಂತು ಲಂಕೆಗೆ ಹೋದ ಹನುಮಂತ—)

ರಾಮನನ್ನು ಬಾಯ್ತುಂಬಾ ಹೊಗಳಿದ ರಾವಣನ್ನ ಜರೆದ
ರಾವಣ ಕೋಪದಿ ಕೆಂಗಣ್ಣಾಗಿ 'ಹಾಳು ಕೋತಿ–' ಎಂದ,
'ಈ ಕೋತಿಯ ಬಾಲಕೆ ಬಟ್ಟೆಯ ಕಟ್ಟಿ ಬೆಂಕಿ ಹಚ್ಚಿರೆ'ಂದ
ಹೊರೆ ಹೊರೆಯಾಗಿ ಅರುವೆ ಬರುವುದಂ ಕಂಡು ಹನುಮ ನಿಂದ
ಎಷ್ಟು ಸುತ್ತಿದರು ಇನ್ನಿಷ್ಟಿಷ್ಟು ಬಾಲ ಬೆಳೆಯುತಿತ್ತು!
ಸುತ್ತಿ ಬೇಸತ್ತು ರಾಕ್ಷಸರೆಲ್ಲಾ ತಂದರೆಣ್ಣೆ ಹೊತ್ತು;
ಬಿಂದಿಗೆ ಕೊಡಗಳತುಂಬಾ ತುಂಬಾ ಎಣ್ಣೆ ಹೊಯ್ದು ನೆನೆಸಿದರು!
ಚಕಮುಕಿ ಹೊಡೆದು ಬೆಂಕಿಯಮಾಡಿ ಬಾಲಕೆ ಹಿಡಿಸಿದರು!
ಹಾ ಹೋಯೆಂದು ಚಪ್ಪಾಳೆ ತಟ್ಟಿ ನಕ್ಕರು ಬಿರುಸಾಗಿ
ಕೋತಿಗೆ ತಕ್ಕ ಶಾಸ್ತಿಯಾಯ್ತೆಂದು ನಲಿದರು ಚೆನ್ನಾಗಿ
ರಾಮನ ನೆನೆದು ಸೀತೆಗೆ ಮಣಿದು ಹನೂಮಂತ ವೀರ
ಹುಂಕೃತಿಗೊಟ್ಟು ಘಮ್ಮನೆ ಎದ್ದು ನೋಡುತೆ ರಾಕ್ಷಸರ
ದೇಹವ ಬೆಳೆಸಿ ಬಾಲವ ಬೆಳೆಸಿ ಅವರ ನಡುವೆ ನೆಗೆದ
ಗಿರ್ರಗಿರ್ರನೆ ಬಾಲವ ತಿರಿಗಿಸಿ ಅವರ ಮುಖಕೆ ಹೊಡೆದ
ಕುಯ್ಯೋ ಮರ್ರೋ ಎಂದವರೆಲ್ಲಾ ಓಡಿದರತ್ತಿತ್ತ!
ಆಕಾಶಕ್ಕೇ ಕಂಬ ನೆಟ್ಟಂತೆ ಎಗರಿದ ಹನುಮಂತ!
ರಾಜ ನಗರಗಳು ಅಂತಃಪುರಗಳು ಪಣ್ಯಶಾಲೆ ಪಶುಶಾಲೆಗಳು
ಭಗಭಗ ವುರಿಯಲು ಹೆದರಿಯೋಡಲು
ಆನೆ ಕುದುರೆಗಳು ಪಶುಗಳು ಜನಗಳು
ಧಗಧಗ ಚರಚರ ಉರಿಯಿತು ಲಂಕಾ!
ಪಟಪಟ ಪಠೀಲು ಢಾಮ್ಮು ಢಾಮ್ಮೆಂದು
ಸಿಡಿಲನು ಸಿಡಿಸಿ ಮಿಂಚನು ಮಿಂಚಿಸಿ
ಎಲ್ಲರ ನಳಿಸುತೆ ಉರಿಯಿತು ಲಂಕಾ!
ಬಾಲ ಮಡಚಿ ಹನುಮಂತನು ಬಂದು ರಾಮನ ವಂದಿಸಿದ.
ಬಾಲಗೊಡೆಯ ಸೀತಾರಾಮರಿಗೆ ಹಿಡಿದು 'ನಮೋ' ಎಂದ.

"ಸುಂದರಿ"




(ರಾಮ ಪರಿವಾರವು ಕಡಲಿಗೆ ಸೇತುವೆ ಕಟ್ಟುವ ಕೋಲಾಹಲದಲ್ಲಿರುವಾಗ ಅಳಿಲೊಂದು ಓಡಿಬರುತ್ತದೆ. ಅದರ ಹಿಂದೆ ಅನೇಕ ಅಳಿಲುಗಳಿವೆ)

"ಕೀಚ್ ಕೀಚ್ ರಾಂ ರಾಂ, ಕೀಚ್ ಕೀಚ್ ರಾಂ ರಾಂ! ಓ! ಓ! ಕೋತಿಗಳ ಉತ್ಸಾಹವೆ! ಅಬ್ಬರವೆ! ಆರ್ಭಟವೆ! ನೋಡಿದರೆ ಹುಳು ಹುಪ್ಪಟೆಗಳಿಗೂ ಹುರುಪು ಹುಟ್ಟುವ ಹಾಗಿದೆ!

ನಾನು ಸುಮ್ಮನಿರಲೆ? ಹೋಗಿ ಒಂದಿಷ್ಟು ಏನಾದರೂ ಮಾಡಲೆ? ನಕ್ಕಾರೆ? ಬೇಡವೆಂದಾರೆ? ನಾನೆಷ್ಟು, ನನ್ನ ಸಹಾಯವೆಷ್ಟು ಈ ನನ್ನ ಅಳಿಲ ಗುಂಪಿನೊಂದಿಗೆ ಹೋದರೆ ಏನೆಂದಾನು ಆ ರಾಮು? ನಮ್ಮ ಚುಂಚು ಮೂತಿಯನ್ನೂ ನರಿಬಾಲವನ್ನೂ ನೋಡಿ ಎಗತಾಳಿ ಮಾಡಿಯಾನೆ?

ಪಾಪ, ಹೆಂಡತಿಯನ್ನು ಕಳೆದುಕೊಂಡು ವಿಯೋಗ ದುಃಖದಲ್ಲಿ ಮುಳುಗಿದ್ದಾನೆ. ನಮ್ಮ ಕೆಲಸ ಅವನಿಗೇನಾದರೂ ತಂಟೆಯಾಗಿ ತೋರಿದರೆ ಬಾಣದ ಮೊನೆಯಿಂದ ಸೀಳಿ ಬಿಸುಟಾನೇನೋ!

ಹೂಂ. ಆತನ ಕೈಯಲ್ಲಿ ಸತ್ತರೆ ಒಳ್ಳೇದೇ ಆಯಿತು. ಅಂದಮೇಲೆ ನಾನೇಕೆ ಹೆದರಿಕೊಂಡು ಉತ್ಸಾಹ ಉಡುಗಿಸಿಕೊಳ್ಳಬೇಕು? ಎಲ್ಲೆಲ್ಲಿಯ ಕೋತಿಗಳೆಲ್ಲಾ ಓಡೋಡಿ ಬರುತ್ತಿದ್ದಾವಂತೆ! ಅವು ಕೊಂಬೆ ಮುರಿದರೆ ನಾವು ಕಾಯಿ ಉದುರಿಸುತ್ತೇವೆ. ಬಿಸಿ ನೀರಿಗೆ ತಣ್ಣೀರು ಜೋಡು.

(ಅಳಿಲು ಆನಂದ ತಧಿಂಗಿಣ ಲಾಗಹಾಕುತ್ತ, ತಿರುಗಿ ಬರುತ್ತ)–

"ಅಮ್ಮಮ್ಮ! ಶ್ರೀರಾಂ! ಏನು ಮುದ್ದು ಏನು ಹೆಚ್ಚು! ವರಗಳಮೂಟೆ! ನವರತ್ನಗಳತೋಟ! ರಾಮನೇ ದೇವನೆಂಬಮಾತು ಅವನಿಗೇ ಸರಿ! ಎಂಥ ಸೌಜನ್ಯ! ಆ! ಆ! ಸುಗುಣಸಾಗರ!

ಅಯ್ಯಯ್ಯೊ! ಇದೇನು ಇಂದ್ರಜಾಲವೋ! ಕಣ್ಣು ಕಟ್ಟೋ! ನನ್ನ ಕಣ್ಣೊಳಗಿಂದ ಹೋಗೋದೇ ಇಲ್ಲವಾ ಮುದ್ದು ಮುಖ! ಮಹಾ ಪುಣ್ಯವಂತ ಹನುಮನ ಪುಣ್ಯಕ್ಕಿಂತಲೂ ನನ್ನ

ಎಂ. ಎಸ್. ಶಾಸ್ತ್ರಿ

ಭಾಗ್ಯ ಏನು ಕಡಮೆಯಾಯಿತು? ಆಹಾ! ನಾವು ಸಣ್ಣ ಜಂತುಗಳಾದ್ದರಿಂದಲೇ ನಾನು ಹೆಚ್ಚು ಮಮತೆಗೆ ಪಾತ್ರನಾದೆ! ನಾನು ಅಳಿ ಲಲ್ಲ ಇನ್ನು! ಸಣ್ಣ ಹನುಮ!

ಅಯ್ಯೊ! ನೆನೆಸಿದರೆ ನಾಚಿಕೆಯಾಗುತ್ತೆ. ಆ ಮಹಾನುಭಾವನ ಮುಂದೆ ನನ್ನ ಅಲ್ಪ ಗುಣ ಚೆನ್ನಾಗಿ ತೋರಿಸಿಬಿಟ್ಟೆ! ಆ ರಾಮು— ಅಂಥಾ ವಿರಹ ದುಃಖದಲ್ಲಿ ಕೂಡಾ ಮನಬಿಚ್ಚಿದ ಚಿದ್ವಿಲಾಸದಿಂದ ನನ್ನ ಮೈಯನ್ನು ನಿಮಿರೋಣವೆಂದು ಕುತೂಹಲ ಪಡುವಾಗ, ಮೂಢಾತ್ಮನಾದ ನಾನು ಜಾರಿಹೋಗುತ್ತಿದ್ದೆ! ಒಂದೆರಡುಬಾರಿ ದಿಕ್ಕುಗೆಟ್ಟು ಅವನ ಶ್ಯಾಮ ಲಾಂಗದ ಮೇಲೆಯೇ ಹಾರಿಕೊಂಡೆ! ಆಚೀಚೆ ಎಗರಿದೆ! ಹಾಗಂತ ಅವನಿಗೆ ಸಿಕ್ಕುವ ಅಳವಿನಲ್ಲೇ ಇದ್ದೆಮತ್ತೆ! ಏನು ತಿಳಿದುಕೊಂಡನೋ! ಎಲ್ಲದಕ್ಕೂ ನಗೆಯಾಡಿದ. ತಂಟೆ ಮಾಡುವ ಮಗುವನ್ನು ನೋಡುತ್ತಾ ಸಂತೋಷ ಪಡುವ ತಾಯಿಯ ಹಾಗೆ! ಅಬ್ಬೋ! ನಾನುಮಾಡಿದ ಅತ್ಯಲ್ಪ ಸಹಾಯವನ್ನು ಎಷ್ಟು ದೊಡ್ಡ ಗುಡ್ಡ ಮಾಡಿ ಹೊಗಳಿದ! ದೊಡ್ಡವರಿಗೂ ಸಣ್ಣವರಿಗೂ ಒಂದೇ ಬಗೆಯ ಹೃದಯ ನೋಡಾ ಎಂದು ಕೊಂಡಾಡಿದ! ಏನು ಸಮಾನಭಾವ! ಇಷ್ಟಕ್ಕೂ ನಾವು ಮಾಡಿದ್ದೇನಿದೆ ಮಹಾ! ಸಣ್ಣ ಸಣ್ಣ ನಾಲ್ಕಾರು ಹರಳುಕಲ್ಲುಗಳನ್ನು ಒಯ್ದು ಒಯ್ದು ಸಮುದ್ರದ ಬದಿಗೆ ಹಾಕಿದ್ದು! ಅಷ್ಟಕ್ಕೇ ಎಷ್ಟು ಉಬ್ಬಿಹೋದ ಆ ರಾಮು! ಎಡಗೈಯಿಂದ ನನ್ನನ್ನು ಹಿಡಿದು ಕೊಂಡು ಬಲಗೈಯಿಂದ ನನ್ನ ಬೆನ್ನನ್ನು ತೀಡುತ್ತಾ ಮೆಚ್ಚಿಗೆಯಾಡಿದ!

ಆ ಕೈಯ ಪ್ರಭಾವವೇನೋ! ಮಹತ್ತೇ ಏನೋ! ನಮ್ಮ ಅಳಿಲ ಜಾತಿಗೆಲ್ಲಾ ಆ ರಾಮಯ್ಯತಂದೆ ತೀಡಿದ ಗುರುತು ಸ್ಥಿರ ವಾಗಿಯೇ ಬಿದ್ದುಹೋಯಿತು! ಏನು ಚೆಂದ ವಾಯಿತು ನಮ್ಮಮೈ! ನಮ್ಮೆಲ್ಲರ ಮೈಯೂ! ಹಣವೂ, ಬಿರುದು ಬಾವಲಿಗಳೂ ಸ್ಥಿರವಲ್ಲ ವೆಂದೇ ಈ ಬಹುಮಾನ ಕೊಟ್ಟನೋ ಆರಾಮು! ಎಷ್ಟು ಸೂಕ್ಷ್ಮ ಬುದ್ಧಿ! ಹೌದು! ಯಾರಿಗೆ ಏನು ಕೊಡಬೇಕೆಂಬುದು ಆ ರಾಮಚಂದ್ರನಿ ಗಲ್ಲದೆ ಮತ್ತೆ ಯಾರಿಗೆ ತಾನೇ ಗೊತ್ತಿದೆ?

ಆಹಾ! ಏನು ಪುಣ್ಯ ನಮ್ಮದು! ಎಂಥ ಭಾಗ್ಯ ನಮ್ಮದು! ಕೀಚ್ ಕೀಚ್, ರಾಂ ರಾಂ! ಕೀಚ್ ಕೀಚ್. ರಾಂ ರಾಂ.



# ಮೂವರು ಗೆಳೆಯರು (ಹಿಂಬದಿಯ ಚಿತ್ರ)

ಕೋತಿ ಗೆಳೆಯ ಮಾಡಿದ ಚೇಷ್ಟೆಗಳಿಂದ ತುಂಬಾ ನೊಂದಿದ್ದ ಕೊರಪಣ್ಣ, ತಂದೆ ತಾಯಿಗಳ ಮೂದಲಿಕೆಗೆ ಮತ್ತಿಷ್ಟು ದುಃಖಪಟ್ಟ. ಆದರೂ ಸಮಾಧಾನಕ್ಕಾಗಿ "ಇಲ್ಲಮ್ಮ—ಕೋತಿಯೂ, ಗಿಳಿಯೂ ಗಲಾಟೆ ಮಾಡಿದುವೇ ಹೊರತು ಕೋಗಿಲೆ ಗೆಳೆಯ ತುಂಬ ಒಳ್ಳೆಯುವ" ಎಂದ ಮತ್ತೆ.

"ಏನೋ ಮತ್ತೆ. ಕೋಗಿಲೆ ಗೆಳೆಯನನ್ನು ಮಾತ್ರ ನಂಬುವುದು ಹೇಗೆ? ಅದು ಕೂಡಾ ತಂಟೆ ಮಾಡಿದರೆ ಮತ್ತೆ ನೀನು ಯಾರೊಂದಿಗೂ ಸ್ನೇಹ ಮಾಡ ಕೂಡದು. ಒಬ್ಬನೇ ಇರಬೇಕು. ತಿಳಿಯಿತೆ?" ಎಂದು ಎಚ್ಚರಿಸಿದಳು ಅವನಮ್ಮ.

ಮರುದಿನ ಕೋಗಿಲೆ ಗೆಳೆಯ ಮತ್ತೆ ಬಂದು ಕೊರಪಣ್ಣನ ಗುಡಿಸಲನ್ನು ಸೇರಿತು. ಇನ್ನೂ ಮಳೆ ಬರುತ್ತಲೇ ಇತ್ತು. ಚಳಿಯಿಂದ ಕೊರಪಣ್ಣನಿಗೆ ಏನು ಮಾಡಲಿಕ್ಕೂ ಬುದ್ಧಿ ಹುಟ್ಟಲಿಲ್ಲ. ನೋಡಿದಾಗ ಮೈಕೈತುಂಬಾ ಕೆಲಸವಿತ್ತು.

ಹುಡುಗ ಕೊರಪಣ್ಣ ಚಿಂತೆಯಲ್ಲಿರುವುದನ್ನು ಕೋಗಿಲೆ ಕಂಡು ಹಿಡಿಯಿತು. ಮೆಲ್ಲಗೆ ಅವನ ಭುಜದಮೇಲೆ ವಾಲಿತು. ಅಲ್ಲಿ ಕೊರಪಣ್ಣ ಈವರೆಗೂ ಕೇಳಿರದಂತೆ ಇಂಪಾಗಿ ಹಾಡ ತೊಡಗಿತು. ಆ ಹಾಡು ಕೇಳುತ್ತಾ ಕೊರಪಣ್ಣ ತನ್ಮಯನಾಗಿ ಹೋದ. ಆ ಕೋಗಿಲೆ ಮರಗಿಡ, ಹೂ, ಬಳ್ಳಿ, ಬಣ್ಣಬಣ್ಣದ ಹಕ್ಕಿಗಳು, ನದಿಗಳು, ವನಗಳು ಇವನ್ನೆಲ್ಲಾ ಕುರಿತು ಕವಿತೆ ಕಟ್ಟಿ ಹಾಡಿತು. ಇಷ್ಟುಮಾತ್ರವಲ್ಲ, ಅಡವಿ ಜಂತುಗಳನ್ನು ಕುರಿತು ವಿಚಿತ್ರ ಕಥೆಗಳನ್ನು ಹಾಡಿತು. ಈ ಹಾಡು ಕಥೆಗಳನ್ನು ಕೇಳುತ್ತಾ ಕೊರಪಣ್ಣ ತನ್ನ ಕೆಲಸಗಳನ್ನೆಲ್ಲಾ ಮುಗಿಸಿಬಿಟ್ಟ. ಹೊತ್ತು ಬಹಳ ಉತ್ಸಾಹದಿಂದ ಹೋಯಿತು. ಸಂಜೆಯಲ್ಲಿ ಅವನ ತಾಯ್ತಂದೆಯರು ಬಂದಾಗಲೇ ಹೊತ್ತು ಹೋಯಿತೆಂದು ಅವನಿಗೆ ತಿಳಿಯಿತು.

ಅವರು ಕೋಗಿಲೆಯ ಸಂಗತಿ ಕೇಳಿ ಬಹಳ ಸಂತೋಷ ಪಟ್ಟರು. "ಈದಿನ ನೀನು ನಿಜವಾದ ಗೆಳೆಯನನ್ನು ಹಿಡಿದಿ" ಎಂದಳು ತಾಯಿ. ಅದಕ್ಕೆ ಕೊರಪಣ್ಣ "ಹೌದು. ನಾವು ಮಾಡಿದಂತೇ ಮಾಡುತ್ತೆ ಕೋತಿ. ನಾವು ಹೇಳಿದ್ದೇ ಹೇಳುತ್ತೆ ಗಿಳಿ. ಆದರೆ ಕೋಗಿಲೆ ಹಾಗಲ್ಲ; ಸ್ವಂತವಾಗಿ ಮಧುರವಾಗಿ ಹಾಡುತ್ತೆ. ಅದು ಆಟ ಪಾಟಗಳಿಂದಲೇ ನಮ್ಮಿಂದ ಕೆಲಸ ಮಾಡಿಸಿಬಿಡುತ್ತದೆ. ಆದುದರಿಂದಲೇ ಅದು ನಿಜವಾದ ಗೆಳೆಯ" ಎಂದ ಕೊರಪಣ್ಣ.

(ಮುಗಿಯಿತು)

# ವಿನಯಶಾಲಿ



ಸಿಕ್ಕರ ಆದಿಗುರುವಾದ ನಾನಕ್ ತನ್ನ ಮುವತ್ತನೆಯ ವಯಸ್ಸಿನಲ್ಲಿ ಸನ್ಯಾಸಿಯಾದ. ಆಗ್ಗೆ ಆತನಿಗೆ ಹೆಂಡತಿಯೂ, ಇಬ್ಬರು ಮಕ್ಕಳೂ ಇದ್ದರು. ಹೆಂಡತಿಯ ಹೆಸರು ಚೂನೀದೇವಿ. ಹಿರಿಯ ಮಗನಿಗೆ ನಾಲ್ಕು ವರ್ಷ, ಹೆಸರು ಶ್ರೀಚಂದ್ರ. ಈತನ ತಮ್ಮ ಲಕ್ಷ್ಮೀದಾಸ್ ಕೆಲವು ತಿಂಗಳ ಕೈಗೂಸು.

ನಾನಕ್ ಜೋಗಿಯಾಗಿ ಸ್ಮಶಾನಗಳಲ್ಲಿ ತಿರುಗಾಡುತ್ತಿರಲು, ಚೂನೀದೇವಿ ತನ್ನ ಮಕ್ಕಳೊಂದಿಗೆ ತೌರುಮನೆ ಸೇರಿದಳು. ಗಂಡನನ್ನು ಅಗಲಿದ ನಂತರ ಆಕೆ ತೌರೂರಿನಲ್ಲಿ ಇಪ್ಪತ್ನಾಲ್ಕು ವರ್ಷಗಳನ್ನು ಕಳೆದಳು.

ಈ ಇಪ್ಪತ್ನಾಲ್ಕು ವರ್ಷಗಳಲ್ಲೂ ಗುರು ನಾನಕ್ ದೇಶವನ್ನೆಲ್ಲಾ ಸುತ್ತಿ ತನ್ನ ಮತವನ್ನು ಪ್ರಚಾರ ಮಾಡಿದ. ಆತನು ಅರವತ್ತು ವರ್ಷ ವೃದ್ಧನಾದ ನಂತರ ದೇಶಾಟನೆಯನ್ನು ಬಿಟ್ಟು ಪಂಜಾಬಿನಲ್ಲಿರುವ ಬಿಯಾಸು ನದಿ ತೀರದಲ್ಲಿ ಒಂದು ಅಚ್ಚುಕಟ್ಟಾದ ಆಶ್ರಮ ನಿರ್ಮಿಸಿದ. ಆ ಪ್ರದೇಶಕ್ಕೆ ಕರ್ತಾರಪುರವೆಂದು ಹೆಸರಿಟ್ಟ. ಕರ್ತಾರಪುರವೆಂದರೆ ವಿಶ್ವಕರ್ತನಾದ ಪರಮೇಶ್ವರನು ನೆಲಸಿರುವ ಸ್ಥಳವೆಂದು ಅರ್ಥ.

ಬಹುಮಂದಿ ಸಾಧುಗಳು, ಯೋಗಿಗಳು, ಶಿಷ್ಯರೂ ಕರ್ತಾರಪುರಕ್ಕೆ ನಾಲ್ಕೂ ದಿಕ್ಕುಗಳಿಂದ ಬಂದು ಗುರುಸಾನ್ನಿಧ್ಯದಲ್ಲಿ ತಂಗಿರುತ್ತಿದ್ದರು. ಆತನ ಶಿಷ್ಯಕೋಟಿಯಲ್ಲಿ ಕೆಲವಾರು ಧನಿಕರೂ, ಜಮಿನುದಾರರೂ ಇದ್ದರು. ಅವರು ಕಾಣಿಕೆಗಳನ್ನು ತಂದು ಆತನಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದರು.

ಮೊದಲಿನಿಂದಲೂ ನಾನಕ್ ಹಣವನ್ನು ಹೆಂಚಿನ ಚೂರುಗಳಂತೆ ಕಾಣುತ್ತಿದ್ದ ಪರಮ ವೇದಾಂತಿ. ಬಂದ ಹಣವನ್ನೆಲ್ಲಾ ಆಗಾಗಲೇ ಸಾಧುಗಳಿಗೆ ವಿನಿಯೋಗಿಸಿ, ಒಂದು ಕಾಸೂ ಉಳಿಸುತ್ತಿರಲಿಲ್ಲ.

ಕರ್ತಾರಪುರದಲ್ಲಿ ನಾನಕ್ ಗುರುಪೀಠ ಸ್ಥಾಪಿಸಿರುವನೆಂದೂ, ಶಿಷ್ಯರು ಬೆಲೆಬಾಳುವ ಕಾಣಿಕೆಗಳನ್ನು ತಂದು ಆತನಿಗೆ ಒಪ್ಪಿಸುತ್ತಿರುವರೆಂದೂ ಚೂನೀದೇವಿಗೆ ತಿಳಿಯಿತು.

ಟಿ. ವಿ. ರಾಜ, ಅರಸೀಕೆರೆ




ಕೂಡಲೇ ಮಕ್ಕಳನ್ನು ಕರೆದುಕೊಂಡು ಆಕೆ ಕರ್ತಾರಪುರವನ್ನು ತಲುಪಿದಳು. ಗಂಡನನ್ನು ಕುರಿತು "ನಮಗೂ ಈ ಆಶ್ರಮದಲ್ಲಿರಲು ಅವಕಾಶ ಕೊಡಿ" ಎಂದು ಕೇಳಿದಳು. ಅದಕ್ಕೆ ನಾನಕ್ "ಎಲ್ಲರೊಂದಿಗೆ ನೀವೂ ಇರಬಹುದು" ಎಂದ.

ಆದರೆ ಎಲ್ಲರಂತಿರದೆ ಪೀಠಕ್ಕೆ ಸಂಬಂಧಿಸಿದ ವ್ಯಹಾರಗಳಲ್ಲಿ ತಲೆಹಾಕಿ, ನಿತ್ಯವೂ ಬರುತ್ತಿದ್ದ ಕಾಣಿಕೆಗಳನ್ನೂ, ಹಣವನ್ನೂ ಭದ್ರಗೊಳಿಸಲು ಪ್ರಾರಂಭಿಸಿದರು.

ಈ ವಿಷಯವು ನಾನಕ್‌ಗೆ ತಿಳಿಯಿತು. ಚೂನೀದೇವಿ ಮತ್ತು ಮಕ್ಕಳನ್ನು ಕರೆದು "ಆಶ್ರಮಕ್ಕೆ ಬರುವ ಹಣವನ್ನು ಸ್ವೀಕರಿಸಿ ಖರ್ಚುಮಾಡುವ ಕಾರ್ಯ ಲೆಹನಾ ಎಂಬ



ಶಿಷ್ಯನಿಗೆ ವಹಿಸಿರುತ್ತೇನೆ. ಆ ಕೆಲಸ ಆತನು ಮಾಡಬೇಕು. ನಿಮ್ಮ ಕೈವಾಡ ಕೂಡದು" ಎಂದು ನ್ಯಾಯವನ್ನು ತಿಳಿಯ ಪಡಿಸಿದ.

ಈ ಮಾತು ಕೇಳಿ ಚೂನೀದೇವಿ ಮತ್ತು ಆಕೆಯ ಮಕ್ಕಳಿಗೆ ಕಷ್ಟಕರವಾಗಿ ತೋರಿತು. ಆಕೆ ನಾನಕ್ ನೊಂದಿಗೆ "ಪೀಠದ ವ್ಯವಹಾರ ನಿಮ್ಮ ಸ್ವಂತ ಮಕ್ಕಳಿಗೆ ಇರಬೇಕು, ಹೊರಗಿನವನಾದ ಲೆಹನಾಗೆ ವಹಿಸುವುದು ನ್ಯಾಯವೇ?" ಎಂದು ಕೇಳಿದಳು.

ಆಗ ನಾನಕ್ "ಈ ಶಿಷ್ಯರೆಲ್ಲಾ ನನ್ನ ಕುವರರೇ! ಇವರಲ್ಲೆಲ್ಲಾ ಶ್ರೇಷ್ಠನು ಲೆಹನಾ. ಆತನೇ ನನ್ನನಂತರ ಈ ಪೀಠಕ್ಕೆ ಅಧಿಪತಿ. ಲೆಹನಾ ಯೋಗ್ಯತೆ ಈ ಶ್ರೀಚಂದ್ರನಿಗಾಗಲೀ, ಲಕ್ಷ್ಮೀದಾಸನಿಗಾಗಲೀ ಇಲ್ಲ. ಇಲ್ಲಿ ಬೇಕಾಗಿರುವುದು ನನ್ನ ಮತಸೂತ್ರಗಳನ್ನು ಅರ್ಥ ಮಾಡಿಕೊಂಡು, ಅವುಗಳನ್ನು ನನ್ನ ಅನಂತರ ಲೋಕಕ್ಕೆ ಭೋಧಿಸುವ ಶಕ್ತಿಯೇ ಹೊರತು ಹಣ ಗಂಟುಮಾಡುವ ಶಕ್ತಿಯಲ್ಲ. ಈ ವಿಷಯದಲ್ಲಿ ನೀವು ನನಗೆ ತೊಂದರೆ ಕೊಡಬೇಡಿ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದ.

ಆದರೂ ಚೂನೀದೇವಿ ಮತ್ತು ಆಕೆಯ ಮಕ್ಕಳು ಪೀಠಾಧಿಪತ್ಯವನ್ನು ಹೇಗಾದರೂ ದಕ್ಕಿಸಿ ಕೊಳ್ಳಬೇಕೆಂಬ ಆಶೆಯಿಂದ ಆ ಮಠದಲ್ಲೇ ಹತ್ತು ವರ್ಷ ಕಳೆದರು.

ಗುರುನಾನಕ್‌ಗೆ ಎಪ್ಪತ್ತು ವರ್ಷ ತುಂಬಿತು. ಒಂದುದಿವಸ ಬೆಳಿಗ್ಗೆ ಆತನು ಲೆಹನಾನನ್ನು ಕರೆದು, "ನಾನು ನಾಳೆರಾತ್ರಿ





ಈ ಲೋಕವನ್ನು ತ್ಯಜಿಸುವೆನು. ನಮ್ಮ ಆಶ್ರಮದ ಹಿಂದಿರುವ ಆಲದಮರದ ಕೆಳಗೆ ನನ್ನ ಹಾಸಿಗೆ ಹಾಕಿ" ಎಂದ.

ಗುರುನಾನಕ್ ಮರಣಶಯ್ಯೆಯಲ್ಲಿ ಮಲಗಿ ಭಗವನ್ನಾಮಸ್ಮರಣೆ ಮಾಡುತ್ತಾ ಮೃತ್ಯು ದೇವತೆಯನ್ನು ಎದುರು ನೋಡುತ್ತಿರಲು, ಚೂನೀದೇವಿ ಮಕ್ಕಳೊಂದಿಗೆ ಅಲ್ಲಿಗೆ ಹೋಗಿ ಪೀಠಾಧಿಪತ್ಯ ತಮ್ಮ ಮನೆತನದಲ್ಲೇ ಉಳಿಯುವಂತೆ ಮಾಡಿರೆಂದು ಕಡೇಸಲ ಕೇಳಿ ಕೊಂಡಳು. ಆದರೆ ನಾನಕ್ ಅದಕ್ಕೆ ಅಂಗೀಕಾರ ಕೊಡಲಿಲ್ಲ. "ನನ್ನ ತರುವಾಯ ಪೀಠಾಧಿಪತಿ ಲೆಹನಾ. ನನ್ನ ತರುವಾಯ ಆತನು ಅಂಗದನೆಂಬ ಹೆಸರಿನಿಂದ ಸಿಕ್ಕರಿಗೆ ಗುರುವಾಗಲಿ" ಎಂದು ತಿಳಿಸಿ ನಾನಕ್ ಸ್ವರ್ಗಸ್ಥನಾದ.

ಗುರುನಾನಕ್‌ನಂತರ ಅಂಗದನು ಗುರುಸೂತ್ರ ಹಿಡಿದು, ಸದಾ ಧ್ಯಾನಮಾಡುತ್ತಾ, ನಾನಕ್ ಬೋಧಿಸಿದ ಮತಸೂತ್ರಗಳನ್ನು ಶಿಷ್ಯರಿಗೆ ಹೇಳಿಕೊಡುತ್ತಾ, ನೀತಿ ನಿಯಮಗಳನ್ನು ಸಾರುತ್ತಾ ಕಾಲನೂಕುತ್ತಿದ್ದ.

ಗುರುನಾನಕ್ ಕಾಲಕ್ಕಿಂತಲೂ ಅಂಗದ ಗುರುವಿನ ಕಾಲದಲ್ಲಿ ಕಾಣಿಕೆ ಮತ್ತು ಹಣ ಹೇರಳವಾಗಿ ಬರತೊಡಗಿತು. ಅಂಗದಗುರು ಆ ಹಣಕ್ಕೆಲ್ಲಾ ಅಧಿಪತಿಯಾದರೂ ಗೋಧಿ ರೊಟ್ಟಿ ಮಾತ್ರ ತಿಂದಿರುತ್ತಿದ್ದನು. ಧನವನ್ನೆಲ್ಲಾ ಸಾಧು ಸಂತರ್ಪಣೆಗೆ ವೆಚ್ಚಮಾಡುತ್ತಿದ್ದ. ಅಂಗದಗುರು ಶಿಷ್ಯಕೋಟಿಯ ಗೌರವಾದರಣೆಗಳನ್ನು ಪಡೆದ ಹಾಗೆಲ್ಲಾ, ನಾನಕನ ಮಕ್ಕಳ ಅಸೂಯೆ ಬೆಳೆಯಿತು. ಅಂಗದ ಗುರುವಿನ ಪಾದಗಳಮೇಲೆ ರಾಜ ಮಹಾರಾಜರು ಸಾಷ್ಟಾಂಗ ಮಾಡಿದರೆ, ಆ ಗೌರವ ನ್ಯಾಯವಾಗಿ ತಮಗೆ ಸಲ್ಲಬೇಕಾಗಿತ್ತಲ್ಲವೇ ಎಂದು ಕೊಳ್ಳುವರು.




'ನಾವೂ ಶಿಷ್ಯರನ್ನು ಜೊತೆಗೂಡಿಸಿ ಗುರುತ್ವ ಸಂಪಾದಿಸೋಣ. ಆಗ ನಮಗೂ ಕಾಣಿಕೆ, ನಮಸ್ಕಾರಗಳು ದೊರೆಯುತ್ತವೆ' ಎಂದು ಶ್ರೀಚಂದ್ರನು ಆಲೋಚಿಸಿ, ಶಿಷ್ಯರನ್ನು ಕೂಡಿಸಲು ಮೊದಲು ಮಾಡಿದ. ಬಹಳ ಕಾಲ ಕರ್ತಾರಪುರದಲ್ಲಿ ಉಳಿದು, ನಾನಕ್ ಮತ ಸೂಕ್ತಗಳನ್ನು ಕೇಳಿದ್ದನಾದುದರಿಂದ, ಗಿಣಿ ಪಾಠದಂತೆ ಅವುಗಳನ್ನು ಉಚ್ಚರಿಸುವನು.

ಅವುಗಳ ಅರ್ಥವನ್ನು ವಿವರಿಸುವಂತೆ ಯಾರಾದರೂ ಕೇಳಿದರೆ ತನಗೆ ತಿಳಿದಂತೆ ಸಿಕ್ಕಾಪಟ್ಟೆ ಅರ್ಥ ಹೇಳುವನು. ಅಂಗದ ಗುರುವಿಗೆ ಈ ಸಮಾಚಾರ ತಿಳಿಯಿತು. ಶ್ರೀಚಂದ್ರನಿಂದ ನಾನಕ್ ಮತಸೂತ್ರಗಳಿಗೆ ಅಪಚಾರವಾಗುತ್ತಿದೆಯೆಂಬುದನ್ನು ಅರಿತಿದ್ದರೂ, ಗುರುಪುತ್ರನೆಂಬ ಗೌರವದಿಂದ ಸುಮ್ಮನಿದ್ದ.

ಆತನು ಹಾಗೆ ಸುಮ್ಮನಿರುವುದನ್ನು ಕಂಡು, ಶ್ರೀಚಂದ್ರನು ಉಬ್ಬಿಹೋಗಿ ಅಂಗದ ಗುರುವನ್ನು ಕುರಿತು ಅತ್ಯಂತ ಹಗುರವಾಗಿ ಮಾತನಾಡ ತೊಡಗಿದ.

ಅಷ್ಟೇ ಅಲ್ಲ. ಅಂಗದಗುರುವನ್ನು ಹೇಗಾದರೂ ಅವಮಾನ ಪಡಿಸಬೇಕೆಂಬ ದುರುದ್ದೇಶದಿಂದ ಒಂದು ದಿವಸ ತನ್ನ ಶಿಷ್ಯರ ಸಮೇತನಾಗಿ ಹೊರಟು ಕರ್ತಾರಪುರಕ್ಕೆ ಸೇರಿದ.

ಗುರುಪುತ್ರನು ಬಂದಿರುವನೆಂದು ಕೇಳಿದ ಕೂಡಲೇ, ಅಂಗದಗುರು ಆತನನ್ನು ಎದುರುಗೊಂಡು, ಗುರುನಾನಕ್‌ಗೆ ನಮುಸ್ಕರಿಸುತ್ತಿದ್ದಂತೆ ಶ್ರೀಚಂದ್ರನಿಗೆ ಸಾಷ್ಟಾಂಗ ನಮುಸ್ಕಾರ ಮಾಡಿ ಗೌರವಿಸಿದ.

ಅಹಂಕಾರದಿಂದ ಕೂಡಿದ್ದ ಶ್ರೀಚಂದ್ರನಿಗೆ ತುಂಬಾ ವಿನಯದಿಂದ ವರ್ತಿಸಿದ ಅಂಗದಗುರುವನ್ನು ಯಾವರೀತಿ ಅವಮಾನಗೊಳಿಸಬೇಕೆಂೋ ತಿಳಿಯಲಿಲ್ಲ. ಸಾಷ್ಟಾಂಗಮಾಡಿ ಮೇಲೇಳುತ್ತಿದ್ದ ಅಂಗದ ಗುರುವಿನ ನೀಳವಾದ ಗಡ್ಡವನ್ನು ಕಂಡು ಶ್ರೀಚಂದ್ರನು ಕೂಡಲೇ "ಏನಯ್ಯಾ ಗಡ್ಡವನ್ನೇಕೆ ಇಷ್ಟು ಉದ್ದ ಬೆಳೆಸಿರುವೆ?" ಎಂದು ಅವಹೇಳನ ಮಾಡಿದ.

ಅಂಗದಗುರು "ಗುರುಪುತ್ರರ ಪಾದರಕ್ಷೆಗಳ ಮೇಲಿನ ಧೂಳನ್ನು ಒರೆಸುವುದಕ್ಕಾಗಿ ಇಷ್ಟು ನೀಳವಾದ ಗಡ್ಡವನ್ನು ಬೆಳೆಸಿದ್ದೇನೆ" ಎಂದು ವಿನಯದಿಂದ ಉತ್ತರವಿತ್ತ. ಈ ಮಾತು ಕೇಳಿ ಶ್ರೀಚಂದ್ರನಿಗೆ ನಾಚಿಕೆಯಾಯಿತು. ಅವನನ್ನು ಹಿಂಬಾಲಿಸಿದ್ದ ಶಿಷ್ಯರು ಅಂಗದ ಗುರುವಿನ ಹಿರಿಮೆಯನ್ನು ತಿಳಿದು ಶ್ರೀಚಂದ್ರನನ್ನು ಬಿಟ್ಟು, ಕರ್ತಾರಪುರದಲ್ಲೇ ಉಳಿದರು. ಅಂದಿನಿಂದ ಶ್ರೀಚಂದ್ರನೂ, ಅವನ ತಮ್ಮನೂ ಪೀಠಾಧಿಪತ್ಯದ ಆಶೆಯನ್ನು ಬಿಟ್ಟುಬಿಟ್ಟರು.



# ಪ್ರತಿಬಿಂಬ



ಅದೊಂದು ವಿಚಿತ್ರವಾದ ರಾಜ್ಯ. ಆ ರಾಜ್ಯ ದಲ್ಲಿ ಒಂದು ಕನ್ನಡಿಯ ಚೂರೂ ಸಿಗುವು ದಿಲ್ಲ. ಯಾಕೆಂದರೆ ಆ ರಾಜ್ಯವನ್ನು ಆಳುತ್ತಿದ್ದ ರಾಣಿ ಕನ್ನಡಿಗಳನ್ನೆಲ್ಲಾ ಚೂರುಚೂರು ಮಾಡಿ ಬಿಸಾಡಬೇಕೆಂದು ಆಜ್ಞೆಮಾಡಿದ್ದಳು. ಒಂದು ವೇಳೆ ಯಾರ ಹತ್ತಿರವಾದರೂ ಕನ್ನಡಿಯ ಚೂರಿರುವುದೆಂದು ತಿಳಿದು ಬಂದರೆ ಅವರಿಗೆ ಮರಣಶಿಕ್ಷೆ. ಇದು ರಾಣಿ ಮಾಡಿದ ಕಾನೂನು.

ಈಕೆ ಈ ವಿಚಿತ್ರ ಕಾನೂನು ಮಾಡಲು ಕಾರಣವಿತ್ತು. ಆ ರಾಜ್ಯವನ್ನು ಪಾಲಿಸುತ್ತಿದ್ದ ರಾಣಿ ಕುರೂಪಿ. ಅಷ್ಟು ಅಸಹ್ಯವಾಗಿದ್ದ ಹೆಂಗಸು ಆ ರಾಜ್ಯದಲ್ಲೇ ಇರಲಿಲ್ಲ. ಆ ವಿಷಯ ರಾಣಿಗೆ ತಿಳಿದಿತ್ತು. ಆದುದರಿಂದಲೇ ತನ್ನ ಪ್ರತಿಬಿಂಬ ತನ್ನ ರಾಜ್ಯದಲ್ಲೆಲ್ಲೂ ಯಾರಿಗೂ ಕಾಣಿಸಬಾರದೆಂದು ಆಕೆ ನಿಶ್ಚಯಿಸಿದಳು.

ಇದಕ್ಕಿಂತಲೂ ಮುಖ್ಯವಾದ ವಿಷಯ ಮತ್ತೊಂದಿತ್ತು. ತನ್ನ ರಾಜ್ಯದಲ್ಲಿ ಸುಂದರಿ ಯರು ತಮ್ಮ ಅಂದಚೆಂದಗಳನ್ನು ಅವರಾ ಗಲೀ, ಇತರರಾಗಲೀ ತಿಳಿಯದಂತೆ ಮಾಡ ಬೇಕು. ತನಗಿಲ್ಲದ ಆನಂದ ಮತ್ತೊಬ್ಬರಿ ಗೇಕಿರಬೇಕು ಎಂದು ಆಕೆ ಯೋಚಿಸಿದ್ದಳು. ಅಂತಲೇ ಆಕೆ ಕನ್ನಡಿಯ ಉಪಯೋಗವನ್ನು ನಿಷೇಧಿಸುವ ಕಾನೂನು ಮಾಡಿದ್ದಳು.

ಈ ಶಾಸನದಿಂದ ಸುಂದರಿಯರಾರೂ ತಮ್ಮ ಸೌಂದರ್ಯವನ್ನು ನೋಡಲಾಗಲೀ ಕಿರುನಗೆ ಪರಿಕಿಸಲಾಗಲೀ, ಮುಡಿಯಲ್ಲಿ ಹೂ ಮುಡಿದುಕೊಂಡು ಕನ್ನಡಿಯಲ್ಲಿ ತಮ್ಮ ಅಂದವನ್ನು ನೋಡಿಕೊಳ್ಳಲಾಗಲೀ ಅವಕಾಶ ವಿಲ್ಲದಾಯಿತು. ಎಷ್ಟು ಸೌಂದರ್ಯವಿದ್ದರೇನು? ಆ ಅಂದವನ್ನು ನೋಡಿಕೊಳ್ಳುವ ಅದೃಷ್ಟ ವಿಲ್ಲದಿರುವಾಗ?

ಕಡೆಪಕ್ಷ ನೀರಿನಲ್ಲೂ ಯಾವ ಸ್ತ್ರೀಯೂ ತನ್ನ ಪ್ರತಿಬಿಂಬ ನೋಡಿಕೊಳ್ಳುವ ಅವಕಾಶ ವಿರಲಿಲ್ಲ. ಅದಕ್ಕಿಂತಲೇ ರಾಜ್ಯದಲ್ಲಿ ಕಾಲುವೆ, ಕೆರೆ, ಕೊಳಗಳಮೇಲೆ ಚಪ್ಪಡಿಕಲ್ಲು ಹಾಕಿ ಮುಚ್ಚಿಸಿದ್ದಳು. ಭಾವಿಗಳಲ್ಲಿ ಪ್ರತಿಬಿಂಬ ನೋಡಿಕೊಳ್ಳುವಂತಿಲ್ಲ. ಏಕೆಂದರೆ ಅವು ತುಂಬಾ ಆಳವಾಗಿವೆ.

ಎಂ. ಕಮಲಾಕರ, ಮಂಗಳೂರು



ಅರಮನೆಗೆ ಸಮೀಪದಲ್ಲಿ ದಮಯಂತಿ ಎಂಬ ಯುವತಿ ಇದ್ದಳು. ಅಪೂರ್ವ ಸುಂದರಿ. ಆಕೆಯನ್ನು ವರಿಸಿದಾತನ ಹೆಸರು ಚಂದ್ರ. ಅವನು ಆಕೆಯ ಅಂದಚಂದಗಳನ್ನು ತುಂಬಾ ಸೊಗುಸಾಗಿ ವರ್ಣಿಸುತ್ತಿದ್ದನು. ಆದರಿಂದಾಗಿ ದಮಯಂತಿಗೆ ಕನ್ನಡಿಯಿಲ್ಲದ ಲೋಪ ಕಾಣಿಸಲಿಲ್ಲ. ಆಕೆಯ ಮನಸ್ಸು ತೃಪ್ತಿ ಹೊಂದಿತ್ತು. ಕೆಲವು ದಿವಸಗಳಾದಮೇಲೆ ಅವರಿಬ್ಬರೂ ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿಕೊಂಡರು.

ಈ ಸಮಾಚಾರ ರಾಣಿ ಕಿವಿಗೆ ಮುಟ್ಟಿತು. ರಾಜ್ಯದಲ್ಲೆಲ್ಲಾ ದಮಯಂತಿ ತುಂಬಾ ಅಂದಗಾತಿ ಎಂಬ ವಿಷಯವನ್ನು ರಾಣಿ ಈ ಮೊದಲೇ ಅರಿತಿದ್ದಳು. ಇತರರು ಸುಖವಾಗಿರುವುದನ್ನು ಕಂಡು ಕರುಬುವ ರಾಣಿ ಈ ವಿವಾಹದ ವಿಷಯ ಕೇಳಿ ದುಃಖಿತಳಾದಳು. ಹೇಗಾದರೂ ಮಾಡಿ ಈ ಮದುವೆಗೆ ಕಲ್ಲು ಹಾಕಬೇಕೆಂಬ ದುರ್ಬುದ್ಧಿ ಆಕೆಗೆ ಜನಿಸಿತು.

* * *

ಮದುವೆಗೆ ಇನ್ನೇನು ಕೆಲವೇ ದಿವಸಗಳಿವೆ ಎಂದಾಗ ಒಂದು ದಿನ ದಮಯಂತಿ ತನ್ನ ಮನೆ ಹಿತ್ತಲಲ್ಲಿ ಓಡಾಡಿಕೊಂಡಿದ್ದಳು. ಆಕೆಯ ಹತ್ತಿರಕ್ಕೆ ತಿರುಪೆಯವಳೊಬ್ಬಳು ಬಂದು, ಕಿಟಾರನೆ ಕಿರಿಚಿ ಕೆಳಗೆ ಬಿದ್ದು ಬಿಟ್ಟಳು. ಬೀಳುವಾಗ,

"ಅಯ್ಯೋ, ಎಂತಹ ಅನಿಷ್ಟವನ್ನು ನೋಡಬೇಕಾಯಿತು ನಾನು" ಎಂದಳು.

"ಏನಮ್ಮಾ, ಏನು ಕಂಡು ಜಿಹಾಸೆ ಹೊಂದಿದೆ?" ಎಂದು ದುಗುಡದಿಂದ ದಮಯಂತಿ ಕೇಳಿದಳು.

"ಏನೇ? ಲೋಕದಲ್ಲೆಲ್ಲಾ ಅತ್ಯಂತ ಕರೂಪಿಯೊಬ್ಬಳನ್ನು ಕಂಡೆ" ಎಂದಳು ಮುದುಕಿ.

"ಯಾರಮ್ಮಾ ಅಂತಹ ಅಂದಗೇಡಿ?" ಎಂದು ಮತ್ತೆ ಕೇಳಿದಳು ದಮಯಂತಿ.

"ಯಾರೇ?—ನೀನೇ! ನನಗೆ ಈಗ ತೊಂಬತ್ತು ವರ್ಷಗಳ ಮೇಲಾಯಿತು. ನಿನ್ನಂತಹ ಕುರೂಪಿಯನ್ನು ನಾನು ಇದುವರೆಗೂ ಕಂಡಿದ್ದೇ ಇಲ್ಲ" ಎಂದಳು.

ದಮಯಂತಿ ಚಕಿತಳಾದಳು. ದೊಪ್ಪನೆ ಕೆಳಗೆ ಕುಸಿದುಬಿದ್ದಳು. ಮುದುಕಿ ಮಾಯ!



ರಾಣಿ ಆ ಮುದುಕಿಯ ಮೂಲಕವಾಗಿ ಮಾಡಿಸಿದ ತಂತ್ರವು ಚೆನ್ನಾಗಿಯೇ ಫಲಿಸಿತು. ಅಂದಿನಿಂದ ದಮಯಂತಿಗೆ ಏನೋ ಒಂದು ಕಳವಳ; ಚಿಂತೆ. "ಅಯ್ಯೋ, ನಾನೆಂತಹ ಕುರೂಪಿ. ನನ್ನದೆಂತಹ ವಿಕಾರಾಕೃತಿ. ಇದುವರೆಗೂ ಈ ವಿಷಯವನ್ನು ಅರಿತುಕೊಳ್ಳಲಿಲ್ಲವಲ್ಲಾ" ಹೀಗೆ ಅವಳನ್ನು ಸಮಾಧಾನ ಪಡಿಸುವ ಸಲುವಾಗಿ ಚಂದ್ರನು ಎಷ್ಟೋ ರೀತಿ ಪ್ರಯತ್ನಿಸಿದ. ಲಾಭವಿಲ್ಲದಾಯಿತು. ಮದುವೆ ಮಾತೆತ್ತಿದರೆ ಕುಗ್ಗಿ ಕಂಗಾಲಾಗುತ್ತಿದ್ದಳು. ಕಂಬನಿ ಮಿಡಿಯುವಳು. ಚಂದ್ರನು ಪರಿಪರಿ ವಿಧದಲ್ಲಿ ಪ್ರಾರ್ಥಿಸಿದ. ಅದಕ್ಕೆ ಆಕೆ "ಚಂದ್ರಾ, ನೀನೆಂದರೆ ನನಗೆ ತುಂಬಾ ಪ್ರೀತಿ. ಆದುದರಿಂದ ತಿಳಿದೂ ತಿಳಿದೂ ಕುರೂಪಿಯಾದ ನಾನು ನಿನಗೆ ಹೆಂಡತಿಯಾಗಲೊಲ್ಲೆನು. ನಿನ್ನನ್ನು ವಂಚಿಸಲಾರೆ" ಎಂದು ಹೇಳಿದಳು.

ದಮಯಂತಿ ಭ್ರಮಾವಶಳಾಗಿ ಕುಂದುತ್ತಿದ್ದಳು. ಆಕೆಗೆ ನಿಜಸ್ಥಿತಿ ತಿಳಿಸುವುದು ಹೇಗೆ? ಈ ಸಮಸ್ಯೆಯನ್ನು ಪರಿಹರಿಸುವ ವಿಧವೇನೆಂದು ಚಂದ್ರನು ರಾತ್ರಿ ಹಗಲು ಯೋಚನೆಯಲ್ಲಿ ಕಳೆಯುತ್ತಿದ್ದನು. ಆತನಿಗೆ ಒಂದು ಯೋಚನೆ ಹೊಳೆಯಿತು. ದಮಯಂತಿ ತನ್ನ ಪ್ರತಿಬಿಂಬ ನೋಡಿಕೊಂಡರೆ ಎಲ್ಲವೂ ಸರಿಹೋಗುವುದು. ಆದರೆ ಆ ರಾಜ್ಯದಲ್ಲಿ ಎಲ್ಲೂ ಕನ್ನಡಿಯ ಚೂರೂ ಸಿಗುವಂತಿಲ್ಲ. ಕಷ್ಟಪಟ್ಟು ಎಲ್ಲಿಂದಲಾದರೂ ಸಂಪಾದಿಸಿ



ಕೊಂಡು ಬಂದರೂ ಸಹ ಕಷ್ಟ. ಏಕೆಂದರೆ ಆ ವಿಷಯ ರಾಣಿಯ ಕಿವಿಗೆ ಬಿತ್ತು ಎಂದರೆ ಕೂಡಲೇ ತಲೆ ತೆಗೆಯಿಸುವಳು.

ಒಂದು ದಿನ ದಮಯಂತಿಗೆ ಸಮಜಾಯಿಸಿ ಹೇಳಿ ಆಕೆಯನ್ನು ರಾಣಿಯ ಬಳಿಗೆ ಕರೆದು ಕೊಂಡು ಹೋದ ಚಂದ್ರ.

ರಾಣಿಯ ಬಳಿಗೆ ಹೋಗಿ "ಒಂದು ಕನ್ನಡಿಯನ್ನು ಅನುಗ್ರಹಿಸುವ ಕೃಪಮಾಡಬೇಕು, ಮಹಾರಾಣೀ" ಎಂದು ಪ್ರಾರ್ಥಿಸಿದ.

ಈ ವಿಚಿತ್ರ ಪ್ರಾರ್ಥನೆ ಕೇಳಿ ರಾಣಿ "ಏನು? ನಮ್ಮ ಎದುರಿನಲ್ಲಿ ಇಂತಹ ಕೋರಿಕೆ ಕೇಳಲು ನಿನಗೆಷ್ಟು ಸೊಕ್ಕು?" ಎಂದು ಗದರಿಸಿದಳು. ಆಗ ಚಂದ್ರನು ದಮಯಂತಿಯ ಮನೋರೋಗಕ್ಕೆ ಕಾರಣ ಹೇಳಿ

"ಮನ್ನಿಸಿ ಮಹಾರಾಣಿ. ಈಕೆ ವಿಚಿತ್ರವಾದ ಸಂಕೋಚದಿಂದ ಬಡವಾಗುತ್ತಿದ್ದಾಳೆ. ತಾನು ಕುರೂಪಿ ಎಂದುಕೊಳ್ಳುತ್ತಿದ್ದಾಳೆ" ಎಂದ.

"ಅದರಲ್ಲೇನು ಸಂದೇಹ...." ಎಂದಳು ರಾಣಿ ಹೂಂಕರಿಸುತ್ತಾ.

ದಮಯಂತಿಯ ತಲೆ ಗಿರ್ರನೆ ತಿರುಗಿತು. 'ಇನ್ನೇಕೆ ಈ ಬಾಳು, ಅಂದು ಆ ಮುದುಕಿ ಇದೇ ರೀತಿ ಹೇಳಿದಳು. ಈಗ ಮಹಾರಾಣಿ ಯವರೂ ಅದೇ ಮಾತು ಹೇಳುತ್ತಿದ್ದಾರೆ' ಎಂದು ಕೆಳಗುರುಳಿದಳು.

ರಾಣಿ ಹೂಡಿದ ತಂತ್ರವನ್ನು ಗ್ರಹಿಸಿ, ಚಂದ್ರನು ಕನಲಿ ಹಿಗೆಂದ: "ಏನಿದು... ರಾಣೀ! ನಿನಗೇನಾದರೂ ಹುಚ್ಚುಗಿಚ್ಚು ಹಿಡಿಯಿತೇ? ತಮಾಷೆಗಾಗಿ ಸುಳ್ಳು ಹೇಳು ತ್ತಿರುವೆಯಾ? ಹೇಗೆ? ತ್ರಿಲೋಕ ಸುಂದರಿ ಯಾದ ನನ್ನ ದಮಯಂತಿಯನ್ನು ಕುರೂಪಿ ಎನ್ನಲು ನಿನಗೆ ಬಾಯಿ ಹೇಗೆ ಬಂತು? ನೀನೇ ಏನೋ ತಂತ್ರಹೂಡಿ ಆ ಮುದುಕಿಯ ಬಾಯಿಂದ ಈ ನಾಟಕವಾಡಿಸಿದೆ. ಅಕ್ಷಮ್ಯ ಅಪರಾಧ. ದ್ರೋಹ, ಮಹಾದ್ರೋಹ. ಈ ಬಗೆಯ ಮೋಸವನ್ನು ನ್ಯಾಯದೇವತೆ ಮೆಚ್ಚ ಲಾರಳು ..." ಎಂದು ಹೇಳುತ್ತಿರುವಾಗ ಭಟರು ಚಂದ್ರನನ್ನು ಹಿಡಿದುಕೊಂಡರು.

ರಾಣಿಯ ಸಿಂಹಾಸನದ ಪಕ್ಕದಲ್ಲೇ ಭೀಕರಾಕಾರಿಯಾದ ತಳವಾರನಿದ್ದ. ಅವ ನನ್ನು ನೋಡಿ ರಾಣಿ ಕೈಸನ್ನೆ ಮಾಡಿದಳು.

ಕೂಡಲೇ ತಳವಾರನು ಕತ್ತಿ ಮೇಲೆತ್ತಿದ. ಅಗಲವಾದ ಅಲಗುಳ್ಳ ಆ ಕತ್ತಿ ಥಳಥಳಿಸು ತ್ತಿದೆ. ಇದ್ದಕ್ಕಿದ್ದಂತೆಯೇ ಎರಡು ಕಡೆಗಳಿಂದ ಚೀರಾಟ ಕೇಳಿ ಬಂತು.

ಆ ರೀತಿ ಕಿರಿಚಿದವರು ಯಾರು? ಥಳ ಥಳಿಸುತ್ತಿರುವ ಕತ್ತಿಯ ಅಲಗಿನಲ್ಲಿ ತನ್ನ ಪ್ರತಿಬಿಂಬ ಕಂಡ ದಮಯಂತಿ ಆನಂದಾತಿರೇಕ ದಿಂದ ಕಿರಿಚಿದವರಲ್ಲಿ ಮೊದಲನೆಯವಳು.

ಎರಡನೆಯದು ರಾಣಿಯ ಸಂತಾಪಗೊಂಡ ಕರ್ಕಶಧ್ವನಿ. ವಿಕೃತಾಕಾರಳಾದ ರಾಣಿಯೂ ಸಹ ತನ್ನ ಪ್ರತಿಬಿಂಬವನ್ನು ಅಕಸ್ಮಾತ್ತಾಗಿ ಆ ಕತ್ತಿಯಮೇಲೆ ಕಂಡಳು. ಕೂಡಲೇ ಆಕೆ ಹೃದಯ ಸ್ತಂಭನದಿಂದ ಧಡಾರನೆ ಭೂಮಿ ಯಲ್ಲಿ ಬಿದ್ದು ಪ್ರಾಣ ನೀಗಿದಳು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಜೂನ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಏಪ್ರಿಲ್ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಮೇ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಮೌನ ಸಾಧಕ

ಎರಡನೇ ಫೋಟೋ : ಮೌನ ಭೇದಕ

ಕಳಿಸಿದವರು : ಆಂಡಾಳ್, C/o ಲೇಟ್

ಎಂ. ಕೆ. ರಂಗಾಚಾರ್, ಓಲ್ಡ್ ಅಗ್ರಹಾರ, ಮೈಸೂರು

ಬಹುಮತಿ ರೂ. 10/-ನ್ನು ಮೇ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

## ★ ಆರತಿ ತಟ್ಟೆ ★




ರಾಮಚಂದ್ರನಾ
ದೇವಾಲಯದಲಿ
ರಾಮಾಯಣ ಕಥೆ
ಕಾಲಕ್ಷೇಪ
ರಸವತ್ತಾಗಿ
ರಾತ್ರಿಕಾಲದಿ
ಕಥನಿಸುತಿದ್ದ
ಶ್ರೀಹರಿದಾಸ.

* *

ಸ್ವರಮಾಧುರ್ಯಂ
ವಚನತರಂಗಂ
ಚಾಟೂಕ್ತಿಗಳೂ
ಗ್ರಾಮಸ್ಥರಿ ಗತಿ
ಉಲ್ಲಾಸಕರಂ.
ಹೊತ್ತು ಮುಳುಗಲು
ದೇವಾಲಯಕೆ
ಮುತ್ತುತಿದ್ದರು
ಗ್ರಾಮಸ್ಥ ಜನಂ.
ಶ್ರೀಹರಿಕಥೆಗೆ.

* *

ಹರಿಕಥೆ ಕೊನೆಗೆ
ಹಿರಿ ಕೊರಳಿಂದ
ಪವಮಾನಸುತನ
ಹಾಡಿನೊಂದಿಗೆ
ಹರಿಕೈಂಕರ್ಯದ
ಹರಿವಾಣವನೂ
ಹಲರ ನಡುವಿನಲಿ
ಇಡುವರು ದಾಸರು.
ಭಕ್ತಿಭಾವದಿಂ
ಜನರೊಮ್ಮಡಿಗೇ
ಕಾಣಿಕೆ ಹಾಕ್ವರು
ಆರತಿ ತಟ್ಟೆಗೆ.

* *

ಹರಿದಾಸರು ಮ
ತ್ತವರ ಜನಗಳೂ
ಆನಂದದಿಂದ
ಎಣಿಸಿಕೊಳುವರು.

* *

ಘಾಟೀಮಾನವ
ನಿದನ್ನು ಕಂಡ
ನಡೆಯದ ರೂಪ್ಯಾ
ತಟ್ಟೆಗೆ ಹಾಕಿದ.
ತಟ್ಟೆಯಲಿದ್ದಾ
ಚಿಲ್ಲರೆಯೆಲ್ಲಾ
ತನ್ನ ಜೇಬಿಗೇ
ಸೇರಿಸಿಕೊಂಡ.

* *

ಹರಿಕಥೆ ಬೃಂದಂ
ಹೋಟ್ಲಿಗೆ ಹೋಗಿ

ಸಾಂಬಾರಿಡ್ಲೀ
ಉಪ್ಮಾ ದೋಸೆ
ಚೆನ್ನಾಗಿ ಹೊಡೆದು
ಬಿಲ್ಲು ಕಟ್ಟಲು,
ಗಲ್ಲಾಪೆಟ್ಟಿಗೆ
ಮುಂದೆ ಮೇಜಲಿ
ಚುಕ್ಕೆಗಳೆಡೆಯಾ
ಚಂದ್ರನೆಂಬಂತೆ
ಚಿಲ್ಲರೆ ಹಣದ
ಮಧ್ಯವಿರುವ ಆ
ರೂಪ್ಯಾ ಬಿಸುಟರು
ಉತ್ಸಾಹದಲಿ.

* *

ಕಾಫೀ ಹೋಟಲ್
ಅಯ್ಯರು ಘಾಟೀ.
'ಖೋಟಾ ನಾಣ್ಯಾ
ನಡೆಯದೆಂದ'ನು.
ಹರಿಕಥೆ ಬೃಂದಂ
ಏನೂ ತಿಳಿಯದೆ
"ಅದೇನಿರಯ್ಯಾ
ಭಕುತರು ಕೊಟ್ಟಾ
ರೂಪ್ಯಾಯನ್ನು
ಖೋಟಾಯೆಂಬಿರೆ?
ಸರಿಯಾಗಿ ನೋಡಿ,
ಭಗವದರ್ಪಣವ
ಅವಮಾನಿಸದಿರಿ."
ಎನ್ನಲು ಅಯ್ಯರು,
"ಅಯ್ಯಾ ಸ್ವಾಮಿ,
ಹರಿದಾಸಗಳೇ!
ಕಳ್ಳ ನಾಣ್ಯಗಳ
ಮಾಡುವಾತನೇ
ನಿಮ್ಮ ವಂಚಿಸಿ
ಚಿಲ್ಲರೆ ದೋಚಿದ.
ಆರತಿ ತಟ್ಟೆಗೆ
ರೂಪ್ಯಾಯನ್ನು
ಹಾಕಿದನೆಂದರೆ
ಕೊಳ್ಳೆಯಲ್ಲವೇ?
ಹೌದೋ ಅಲ್ಲವೊ
ನಿಮ್ಮ ಮುಖಗಳೇ
ಹೌದೌಂದೆಂದೇ
ಹೇಳುವುದಲ್ಲ!
ಸರಿ ಕಥೆಯಿರಲಿ,
ತಿಂದ ತಿಂಡಿಗೆ
ಸರಿದುಡ್ಡು ಕೊಟ್ಟು
ಹೋಗಿರಿ" ಎಂದ.

* *

ಖೋಟಾ ರೂಪ್ಯಾ
ಆದಮಾತ್ರಕೆ
ಹರಿಕಥೆಗೇನು
ಲೋಪವು ಉಂಟೆ?
ತಾಂಬಾಣದಿಂದ
ಹದಿನೈದೂ ಮು
ಕ್ಕಾಲಾಣೆಯ ದೋ
ಚಿದನಲ ಕಳ್ಳ!
ಆ ಕೊಳ್ಳೇ ಗಾ
ರನ್ನ ಹಿಡಿಯುವ
ಚಿಂತೆಯಿಂದ ಹರಿ
ದಾಸರ ಹರಿಕಥೆ
ಆಭಾಸದ ದನಿ
ಹೊರಡಿಸುತಿತ್ತು!

* *

ಏನೇ ಇರಲಿ
ಖೋಟಾ ನಾಣ್ಯಕೆ
ಆರತಿ ತಟ್ಟೆ
ಸಾರುವ ದಾರಿ!

—"ಶ್ರೀರಾಮ"



Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26, Controlling Editor SRI 'CHAKRAPANI'



ಬಹುಮಾನ ಪಡೆದ ಶೀರ್ಷಿಕೆ

ಮೆಟ್ಟಬೇಡ !

ಕಳಿಸಿದವರು:
ಯಚ್. ಚಂದ್ರಶೇಖರ ರಾವ್

CHANDAMAMA (Kannada) APRIL 1954 Regd. No. M. 5210




ಬಣ್ಣದ ಚಿತ್ರ ಕಥೆ—೪